

# ಅಕ್ಷರ ಚಿಂತನ

ಸಮಾಜಗಳಿಗೆ ವಿಚಿತ್ರ ರೀತಿಯ ಮರೆವು ಆವರಿಸುತ್ತದೆ ಅದರಲ್ಲೂ ತಾನು ಚಿಂತಿಸುತ್ತಿದ್ದ, ಪ್ರತಿಕ್ರಿಯಿಸುತ್ತಿದ್ದ, ಭಾವಿಸುತ್ತಿದ್ದ ಕ್ರಮಗಳು ಮರೆತು ಹೋಗುವುದು ದೊಡ್ಡ ದುರಂತವೇ ಸರಿ ವಸಾಹತುಶಾಹಿ ನಂತರದ ಭಾರತೀಯ ಸಮಾಜಕ್ಕೆ ಈ ರೀತಿಯ ವಿಸ್ಮೃತಿ ಈಗ ಆವರಿಸಿಬಿಟ್ಟಿದೆ. ನಮ್ಮ ಸಮಾಜದೊಳಗೆ ಅಂತರ್ಗತವಾಗಿದ್ದ ವೈವಿಧ್ಯಮಯ ವೈಚಾರಿಕ ರಚನೆಗಳು ಮರೆತುಹೋಗಿರುವುದರಿಂದ ಈಗ ಲಭ್ಯವಿರುವ ಚಿಂತನಕ್ರಮಗಳು ಪೂರ್ಣವಾಗಿ ಪಶ್ಚಿಮಮುಖಿಯಾಗಿ ಬಿಟ್ಟಿವೆ ನಮ್ಮನ್ನು ಕಾಡುತ್ತಿರುವ ಬಿಕ್ಕಟ್ಟುಗಳನ್ನು ಅವುಗಳ ಮೂಲಕ ಸಮಗ್ರವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ 'ಅಕ್ಷರ ಚಿಂತನ'ದ ಪ್ರಮುಖ ಗುರಿ ಈ ವೈಚಾರಿಕ ವಿಸ್ಮೃತಿಯನ್ನು ದಾಟುವುದೇ ಆಗಿದೆ

ಕನ್ನಡಿಗಳೋ, ದೀಪಗಳೋ ಆಗದ ಚಿಂತನೆಗಳು ನಿರುಪಯುಕ್ತ ಈಗ ನಮ್ಮನ್ನು ಕಿತ್ತು ತಿನ್ನುತ್ತಿರುವ ಹಲವಾರು ಸಮಸ್ಯೆಗಳನ್ನು ಎದುರಿಸಲು ಉಪಯುಕ್ತವಾಗುವಂತಹ ಪರ್ಯಾಯ ಚಿಂತನಕ್ರಮಗಳನ್ನು 'ಅಕ್ಷರ ಚಿಂತನ' ವಿಮರ್ಶಾತ್ಮಕವಾಗಿ ಮಂಡಿಸುತ್ತದೆ ಈಗ ಪ್ರತಿಷ್ಠಿತವಾಗಿರುವ, ಅಧಿಕಾರಸ್ಥವಾಗಿರುವ, ಬಲಿಷ್ಠವಾಗಿರುವ ಚಿಂತನ ಕ್ರಮಗಳಿಗಿಂತ ಬೇರೆಯದನ್ನು ಹುಡುಕುವ ಈ ಪುಸ್ತಕಮಾಲೆ, ಈಗ ಪಶ್ಚಿಮದಲ್ಲೂ ಭಿನ್ನಮತೀಯವಾಗಿರುವಂಥದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ ವ್ಯಕ್ತಿಗಳು, ಚಳುವಳಿಗಳು, ಆಲೋಚನಾ ಪ್ರಸ್ಥಾನಗಳು, ಬಿಡಿಕೃತಿಗಳು ಹಾಗೂ ಅನುವಾದಗಳು, ಸ್ವತಂತ್ರ ಕೃತಿಗಳು, ವ್ಯಾಖ್ಯಾನಗಳು– ಹೀಗೆ ವಿವಿಧ ಹರಹಿನಲ್ಲಿ ಈ ಪುಸ್ತಕಮಾಲೆ ಬರಲಿದೆ

ಕನ್ನಡದ ಮೂಲಕವೇ ಸಮಸ್ತ ವಿಶ್ವವನ್ನು ಕಂಡುಕೊಳ್ಳುವ ಮಹತ್ವಾಕಾಂಕ್ಷೀ ಪ್ರಯತ್ನ ಇದು

ಪ್ರಧಾನ ಸಂಪಾದಕ : ಡಿ. ಆರ್. ನಾಗರಾಜ್

ವಿದ್ಯಾಪತಿ ಕವಿಯ

# ಪುರುಷ ಪರೀಕ್ಷೆ

ಅನುವಾದ :

**ಡಿ. ಎ. ಶಂಕರ್**

ಹಿನ್ನುಡಿ :

**ಡಿ. ಆರ್. ನಾಗರಾಜ್**



ಬೆಲೆ : ರೂ. 25/-

**First Edition : December 1993**



**PURUSHA PARIKSHE BY VIDYAPATI**
**Kannada**

a monograph on the Poet Vidyapati
with translations of his stories

*Translated by*

**Dr. D. A. SHANKAR**

*with an afterword by*

**Dr. D. R. NAGARAJ**

*Printed at*

**SHOBHA PROCESS PRINTERS**
Darbe - 574 202, Puttur, D K

*Published by* ·

**AKSHARA PRAKASHANA**
Heggodu, Sagara
Karnataka - 577 417

*This series AKSHARA CHINTANA- a series on Indian & Kannada Thoughts is endowed by the Rockefeller Brothers Fund through a grant from the Program for Asian Projects which is administered by the Ramon Magsaysay Award Foundation.*

# ಎರಡು ಮಾತು

*ಕನ್ನಡ ಸಾರಸ್ವತ ಲೋಕದಲ್ಲಿ ಪ್ರೊ। ಡಿ. ಎ. ಶಂಕರರು ವಿಮರ್ಶಕರಾಗಿ, ಕವಿಯಾಗಿ, ಅನುವಾದಕರಾಗಿ ಪ್ರಸಿದ್ಧರು. 'ಅಕ್ಷರ ಚಿಂತನ'ಕ್ಕೆ ಶ್ರೀಯುತರು ವಿದ್ಯಾಪತಿಯ ಸಂಸ್ಕೃತ ಕಥಾಸಂಕಲನ 'ಪುರುಷ ಪರೀಕ್ಷೆ'ಯನ್ನು ಇಂಗ್ಲಿಷಿನಿಂದ ಅನುವಾದಿಸಿ ಕೊಟ್ಟಿದ್ದಾರೆ. ಜತೆಗೆ ಸಂಪಾದಕೀಯ ಲೇಖನವಾಗಿ ವಿದ್ಯಾಪತಿಯನ್ನು ಸಾಂಪ್ರದಾಯಕ ಪ್ರತಿಭೆಯ ಪ್ರತಿನಿಧಿ ಎಂದು ಸ್ವೀಕರಿಸಿ ಡಾ. ಡಿ. ಆರ್. ನಾಗರಾಜರು ಮಂಡಿಸಿದ ಚಿಂತನೆ ಇದೆ.*

# ಮೊದಲ ಮಾತು

*ಹಳೆಯ ಪುಸ್ತಕದ ಅಂಗಡಿಗಳಲ್ಲಿ, ದೊಡ್ಡ ಗ್ರಂಥಾಲಯಗಳಲ್ಲಿ ಯಾವುದೋ ಪುಸ್ತಕ ಹುಡುಕುತ್ತಿರುವಾಗ ಆಕಸ್ಮಿಕವಾಗಿ, ಆಶ್ಚರ್ಯ ಹುಟ್ಟಿಸುವಂಥ ಪುಸ್ತಕ ಇದ್ದಕ್ಕಿದ್ದಂತೆ ಲಭ್ಯವಾಗುತ್ತದೆ. ಹಿಂದೆ ಬೆಂಗಳೂರಿನ ಅವೆನ್ಯೂ ರಸ್ತೆಯ ಅಥವಾ ಬಳೇಪೇಟೆಯ ಅಂಗಡಿಯೊಂದರಲ್ಲಿ ಯಜಮಾನ್ ಗುಜ್ಜಾರಪ್ಪನವರು ಅಚ್ಚು ಹಾಕಿಸಿದ್ದ ಸರಸ್ವತೀಬಾಯಿ ರಾಜವಾಡೆ ಅವರ "ಆಹುತಿ" ಕತೆಗಳ ಸಂಕಲನ ನನಗೆ ಹಾಗೆಯೇ ಸಿಕ್ಕಿದ್ದು. ಶಿಮ್ಲಾದ ಭಾರತೀಯ ಉಚ್ಚ ಅಧ್ಯಯನ ಸಂಸ್ಥಾನದ ಗ್ರಂಥಾಲಯದಲ್ಲಿ ತಂತ್ರಕ್ಕೆ ಸಂಬಂಧಪಟ್ಟ ಪುಸ್ತಕವೊಂದನ್ನು ಹುಡುಕುತ್ತಿದ್ದಾಗ ಸಿಕ್ಕಿದ್ದು ವಿದ್ಯಾಪತಿಯ "ಪುರುಷ ಪರೀಕ್ಷೆ".*

*ನಾನು ಹುಟ್ಟುವುದಕ್ಕೆ ಎರಡು ವರ್ಷ ಮೊದಲೇ ಅಚ್ಚಾಗಿದ್ದ, ಆಪ್ಯಾಯಮಾನವಾದ ಹಳೆಯ ವಾಸನೆ ಹೊತ್ತಿದ್ದ ಈ ಪುಸ್ತಕ ನನ್ನ ಮನಸ್ಸನ್ನು ಸೆಳೆದದ್ದು ಅದರ ಗ್ರಂಥಕಾರನ ಹೆಸರಿನಿಂದ. ವಿದ್ಯಾಪತಿಯ ಹೆಸರು ಪರಿಚಿತವಾಗಿತ್ತು. ಹಾ. ಮಾ. ನಾಯಕರ "ಪದಾವಳಿ"ಯ ಅನುವಾದ ನೋಡಿದ್ದೆ. ಅದೇ ಕವಿ ಕತೆಗಳನ್ನು ಬರೆದಿರುವುದು ನನಗೆ ತಿಳಿದಿರಲಿಲ್ಲ. ಕತೆಗಳನ್ನು ಓದುವುದು ಏನು ಕಷ್ಟ, ಓದೋಣ ಎಂದು ತಂದೆ.*

*ತಂದ ರಾತ್ರಿಯೇ ಓದಲು ಪ್ರಾರಂಭಿಸಿದೆ. ಓದಿದ ಕತೆಗಳು ನನ್ನ ಮನಸ್ಸನ್ನು ಎಷ್ಟು ಹಿಡಿದುವು ಅಂದರೆ ಅದೇ ರಾತ್ರಿ ನಾಲ್ಕು ಕತೆಗಳನ್ನು ಕನ್ನಡಕ್ಕೆ ವರ್ಗಾಯಿಸಿದೆ!*

*ಈ ಸಮಯದಲ್ಲಿ ಬೆಂಗಳೂರಿಗೆ ಹೋಗಿದ್ದ, ಇಲ್ಲಿ ನನ್ನ ಕವನ, ಕೊರೆತ ಇತ್ಯಾದಿಗಳಿಗೆ ಪ್ರೀತಿಯಿಂದ ಕಿವಿಗೊಡುವ ಡಿ. ಆರ್. ನಾಗರಾಜ್ ವಾಪಸ್ಸು ಶಿಮ್ಲಾಗೆ ಬಂದರು. ಅವರು ಬಂದದ್ದೇ ಈ ಕತೆಗಳ ಜೊತೆ ಬೇರೆ ಇನ್ನಷ್ಟು ಬರಹವನ್ನು ಅವರ ತಲೆಯ ಮೇಲೆ ಹಾಕಿ, 'ಸ್ವಾಮಿ, ಬೇಸರವಾದಾಗ ಓದಿ' ಎಂದೆ.*

*ಅವರು ಮೂರನೆಯ ದಿನ ಬೆಳಗ್ಗೆಯೇ ಬಂದು, ಕತೆಗಳು ಅವರಲ್ಲಿ ಹೊಳೆಯಿಸಿದ ಹೊಸ ವಿಚಾರಗಳನ್ನೂ, ಒಳನೋಟಗಳನ್ನೂ ಹೇಳಿ, "ಇದನ್ನು ಒಂದು ಪುಸ್ತಕ ಮಾಡೋಣ. ನೀವು ಆಯ್ಕೆ ಮಾಡಿ ಉಳಿದವುಗಳನ್ನೂ*

ಅನುವಾದಿಸಿ'' ಎಂದರು. ಜೊತೆಗೆ ನನಗೆ ಒಂದು ವಾರದಲ್ಲಿ ಹಸ್ತಪ್ರತಿ ಬೇಕು ಎಂದು ಸ್ನೇಹದಲ್ಲಿ ತಾಕೀತು ಮಾಡಿ ಹೋದರು. ಅವರ ಉತ್ಸಾಹ, ಒತ್ತಾಯಗಳು ಇಲ್ಲದಿದ್ದರೆ ಈ ಕತೆಗಳು ಇಷ್ಟು ಬೇಗ ಪುಸ್ತಕ ರೂಪಿನಲ್ಲಿ ಬರುತ್ತಿರಲಿಲ್ಲ. ಡಿ. ಆರ್. ನಾಗರಾಜ್ ಅವರಿಗೆ ನಾನು ಕೃತಜ್ಞ.

* * *

ಮಿಥಿಲಾ ನಗರ ಹೇಗೆ ಜನಕ, ಸೀತೆ, ಯಾಜ್ಞವಲ್ಕ್ಯ, ಗೌತಮ ಮೊದಲಾದ ಪುರಾಣ ಪ್ರಸಿದ್ಧರೊಂದಿಗೆ ಸಮೀಕೃತವಾಗಿದೆಯೋ, ಹಾಗೆಯೇ ವಿದ್ಯಾಪತಿಯ ಪದಾವಳಿಯೊಂದಿಗೂ ಸಮೀಕೃತವಾಗಿದೆ. ನೂರಾರು ವರ್ಷಕಾಲ ಜನರ ಬಾಯಲ್ಲಿ ನಲಿದು, ಆ ನಂತರ ಬಂಗಾಳದ ವೈಷ್ಣವ ಪಂಥ ಹಾಗೂ ಶ್ರೀ ಕೃಷ್ಣ ಚೈತನ್ಯರ ಮುಖಾಂತರ ಇಡೀ ಭಾರತದ ಶೃಂಗಾರ-ಧಾರ್ಮಿಕ ಕಾವ್ಯ ಪರಂಪರೆಯನ್ನೇ ಅದು ತನ್ನ ಪ್ರಭಾವಲಯಕ್ಕೆ ತಂದುಕೊಂಡಿದೆ. ವಿದ್ಯಾಪತಿಯ ಈ ಪದಾವಳಿಗಳ ಮೋಹಕತೆಗೆ ಸೋಲದ ಸಹೃದಯರೇ ಇಲ್ಲ.

ಆದರೆ ವಿದ್ಯಾಪತಿ ಬರೆದದ್ದು ಪದಾವಳಿಯನ್ನೊಂದನ್ನೇ ಅಲ್ಲ. ಅವನು ಮೂರು ಜನ ರಾಜರ ಆಸ್ಥಾನದಲ್ಲಿ, ತನ್ನ ಕಾಲದ ರಾಜಕೀಯ ಸ್ಥಿತಿ-ಗತಿಯಲ್ಲಿ ಸಕ್ರಿಯವಾಗಿ ಬದುಕಿದ್ದವನು. ಹೀಗಾಗಿ ಆ ಕಾಲದ ಎಲ್ಲ ಬಗೆಯ ಚಿಂತನೆಯೂ ಅವನ ಕಾವ್ಯ ರಚನೆಯನ್ನು ಪ್ರವೇಶಿಸಿವೆ. ವಿದ್ಯಾಪತಿಯ ಕೃತಿಗಳು ಕೇವಲ ಸಾಹಿತ್ಯಕವಾಗಿ ಅಲ್ಲ ರಾಜಕೀಯವಾಗಿಯೂ ಸಾಮಾಜಿಕವಾಗಿಯೂ ಅತ್ಯಂತ ಮಹತ್ವಪೂರ್ಣವಾದವು. ''ವಿಭಾಗಸಾಗರ'' ಎನ್ನುವ ಅವನ ಗ್ರಂಥ ಆಸ್ತಿ ವಿಭಜನೆ, ಆಸ್ತಿಯ ಹಕ್ಕು ಇತ್ಯಾದಿಗಳನ್ನು ಕುರಿತದ್ದು. ''ಲಿಖನಾವಳಿ''- ಪತ್ರಲೇಖನ ಕಲೆಯ ವೈಶಿಷ್ಟ್ಯವನ್ನು ಹೇಳುವುದರ ಜೊತೆಗೆ ಅಂದಿನ ಮಿಥಿಲೆಯ ಆರ್ಥಿಕ, ಸಾಮಾಜಿಕ ಪರಿಸ್ಥಿತಿಯ ಬಗ್ಗೆಯೂ ಬೆಳಕು ಚೆಲ್ಲುತ್ತದೆ ''ಗಯಪಟ್ಟಾಲಕ,'' ಅಂತ್ಯಕ್ರಿಯೆಯಲ್ಲಿ ಅನುಸರಿಸಬೇಕಾದ ವಿಧಿಗಳನ್ನು ಚರ್ಚಿಸುತ್ತದೆ. ಅದರ ಹೆಸರೇ ಸೂಚಿಸುವಂತೆ ''ಗಂಗಾವಾಕ್ಯಾವಳಿ'' ಗಂಗೆಯ ಮಹಿಮೆಯನ್ನು ಕುರಿತಾದದ್ದು.

''ಪುರುಷ ಪರೀಕ್ಷೆ''ಯ ರಚನೆಯ ಮೊದಲು, ದೇವಸಿಂಹನ ಆಜ್ಞಾನುಸಾರವಾಗಿ, ವಿದ್ಯಾಪತಿ ''ಭೂಪರಿಕ್ರಮ'' ಎನ್ನುವ ಕತೆಯೊಂದನ್ನು ಬರೆದಿದ್ದ. ಬಲದೇವ ಎನ್ನುವವನು ಜನಕ ದೇಶವನ್ನು ನೋಡಲು ಹೊರಟಾಗ ಹೇಳಿದ ಕತೆಗಳು ಇವು. ಇಲ್ಲಿನ ಎಂಟು ಕತೆಗಳು ಮುಂದಿನ ಗ್ರಂಥವಾದ ''ಪುರುಷ ಪರೀಕ್ಷೆ''ಯಲ್ಲಿ ಸೇರ್ಪಡೆಯಾಗಿವೆ.

"ಪುರುಷ ಪರೀಕ್ಷೆ"– ಸುಮಾರು ೧೪೧೨–೧೬ರಲ್ಲಿ, ಶಿವಸಿಂಹನ ಕಾಲದಲ್ಲಿ ರಚಿತವಾದದ್ದು – ಒಟ್ಟು ನಲವತ್ತೊನಾಲ್ಕು ಕತೆಗಳ ಸಂಕಲನ. ಇದರ ರಚನೆಯಲ್ಲಿ ವಿಷ್ಣುಶರ್ಮನ "ಪಂಚತಂತ್ರ"ದ ಪ್ರಭಾವ ಕಾಣಬಹುದು.

ಇಡೀ ಪುಸ್ತಕಕ್ಕೆ ಒಂದು ಕಾವ್ಯ ಚೌಕಟ್ಟನ್ನು ಒದಗಿಸುವುದು ಪಾರಾವಾರ ದೊರೆಯ ಆತಂಕ. ಅವನು ಮಗಳಿಗೆ ತಕ್ಕ ವರ ಹುಡುಕುವ ಸಮಸ್ಯೆಯಲ್ಲಿ ಸಿಕ್ಕಿಕೊಂಡಿದ್ದಾನೆ. ನಿಜವಾದ ಪುರುಷಲಕ್ಷಣ, ಗುಣ ಯಾವುದು ಎನ್ನುವುದು ಅವನ ಸಮಸ್ಯೆ. ಈ ಸಮಸ್ಯೆಗೆ ಉತ್ತರವಾಗಿ ಸುಬುದ್ಧಿ ಎನ್ನುವ ವೃದ್ಧಜ್ಞಾನಿ ಕತೆಗಳ ಮೂಲಕ ಪುರುಷರ ಸ್ವಭಾವವನ್ನೂ ಅವರ ಗುಣದೋಷಗಳನ್ನೂ ವಿವರಿಸುತ್ತಾ ಹೋಗುತ್ತಾನೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಉದಾಹರಣೆಗಳಲ್ಲ: ಪ್ರತಿ–ಉದಾಹರಣೆಗಳು. ಧೈರ್ಯ, ಸತ್ಯಪ್ರಿಯತೆ, ಋಜುತ್ವ, ಅಕಳಂಕ ಪ್ರೇಮ ಮುಂತಾದುವುಗಳ ಕತೆಯ ಜೊತೆಜೊತೆಗೇ ಇವನ್ನು ಪ್ರಶ್ನಿಸುವ, ತಮಾಷೆ ಮಾಡುವ ಕತೆಗಳೂ ಇವೆ.
(ನೋಡಿ, 'ಮಾತುಗಾರನ ಕತೆ'; 'ಚಿತ್ರಕಲಾನಿಪುಣನ ಕತೆ')

ಹಾಗೆಯೇ ಇಲ್ಲಿನ ಅನೇಕ ಪಾತ್ರಗಳು ನೇರವಾಗಿ ವಿದ್ಯಾಪತಿಯ ಕಾಲದ ಚಾರಿತ್ರಿಕ ಸಂದರ್ಭದಿಂದಲೇ ಬಂದವು. ವಿಕ್ರಮಾದಿತ್ಯ ಪುರಾಣ ಪುರುಷ. ಆದರೆ ಇವನ ಜೊತೆಗೆ ಚಂದ್ರಗುಪ್ತನೂ ಇದ್ದಾನೆ. (ಈ ಕತೆಗಳನ್ನು ಇಲ್ಲಿ ಸೇರಿಸಿಲ್ಲ.) ಅವನೊಟ್ಟಿಗೆ ಅಲ್ಲಾವುದ್ದೀನ್ ಖಿಲ್ಜಿ, ಭೋಜರಾಜ, ರಣತಂಭೂರಿನ ಹಮ್ಮೀರ ದೇವನೂ ವಿದ್ಯಾಪತಿಯ ವಂಶಸ್ಥರೂ ಇದ್ದಾರೆ; ಶಶಿ, ಮೂಲದೇವರಂಥ ಪ್ರಚಂಡರೂ ಮಿಥಿಲೆಯಲ್ಲಿ (ಚಿತ್ರಕಲಾ ನಿಪುಣನ ಕತೆ) ಇದ್ದರಂತೆ!

ಒಟ್ಟಿನಲ್ಲಿ ಪುರುಷ ಪರೀಕ್ಷೆ ಕನ್ನಡಕ್ಕೆ ಬರಬೇಕಾದ ಪುಸ್ತಕ ಎಂದು ನನಗೆ ಅನ್ನಿಸಿತು. ಇದನ್ನು ಓದಿದವರಿಗೂ ಹಾಗೆಯೇ ಅನ್ನಿಸಿದರೆ ನನ್ನ ಶ್ರಮ ಸಾರ್ಥಕ.

ಶಿಮ್ಲಾ
೨೧ ಸೆಪ್ಟಂಬರ್ ೧೯೯೩

ಡಿ. ಎ. ಶಂಕರ್

# ಪರಿವಿಡಿ

# ಪ್ರವೇಶ

ದುರ್ಗೆ, ನಿನಗೆ ನಮಿಸುತ್ತೇನೆ! ಜಗದಾದಿ ಶಕ್ತಿಯೇ ನಿನಗೆ ನನ್ನ ವಂದನೆ! ಸೃಷ್ಟಿಕರ್ತ ಬ್ರಹ್ಮನೂ ನಿನ್ನ ಆರಾಧಕನೇ. ದೇವತೆಗಳಿಂದ ಪೂಜಿಸಲ್ಪಡುವ, ಚಂದ್ರಚೂಡನಾದ ಶಿವನೂ ನಿನ್ನನ್ನು ಆರಾಧಿಸುತ್ತಾನೆ. ಅನೇಕ ಕಾಲ ಪರ್ಯಂತ ಮುನಿಜನರಿಂದ ಧ್ಯಾನಿಸಲ್ಪಡುವ ಮಹಾವಿಷ್ಣುವು ನಿನ್ನಲ್ಲಿ ಮನಸ್ಸನ್ನಿರಿಸಿ ನಿನ್ನನ್ನು ಆರಾಧಿಸುತ್ತಾನೆ. ಅಂತಹ ನಿನಗೆ ನನ್ನ ನಮನ.

ದೇವಸಿಂಹ ಮಹಾರಾಜನ ಮಗನಾದ ಶಿವಸಿಂಹ ಬಹುಕಾಲ ಬದುಕಲಿ! ಧೀರೋದಾತ್ತ ನಾಯಕರಲ್ಲಿ ಅತಿ ಗೌರವಾನ್ವಿತನೂ ಪಂಡಿತರಲ್ಲಿ ಅಸಾಮಾನ್ಯ ತಿಳುವಳಿಕೆ ಉಳ್ಳವನೂ ಆದ ಈತ ನಿಜವಾಗಿ ಎಲ್ಲ ನಾಯಕರ ಚೂಡಾಮಣಿ

ಈ ಶಿವಸಿಂಹ ಮಹಾರಾಜನ ಆಸ್ಥಾನದಲ್ಲಿ ಕಂಗೊಳಿಸುವ ಕವಿ ವಿದ್ಯಾಪತಿ ತನ್ನ ಪ್ರಭುವಿನ ಅಪ್ಪಣೆಯ ಮೇರೆಗೆ ಈ ಕಥೆಗಳನ್ನು ರಚಿಸಿದ್ದಾನೆ: ಬುದ್ಧಿ ತಿಳಿಯದ ಎಳೆಯರಿಗೆ ನೀತಿಬೋಧೆ; ಮನ್ಮಥಲೀಲೆಯಲ್ಲಿ ಆಸಕ್ತರಾಗಿರುವ ನಗರವನಿತೆಯರ ಶೃಂಗಾರಶುಚಿವೃದ್ಧಿ; ಸಕಲವಿದ್ಯಾಪಾರಂಗತರಾದ ಜನರಿಗೆ ಸುಂದರವಾದ ಭಾಷೆಯಲ್ಲಿ ಜ್ಞಾನ ಸಂಪಾದನೆ.

ಈ ದೃಷ್ಟಿಯಿಂದ ರಚಿತವಾಗಿರುವ ಈ ಕಥೆಗಳಿಗೆ ಕಿವಿಗೊಡದ ಜನ ಯಾರು?

ಪುರುಷ ಪರೀಕ್ಷೆಯ ವಿಧಾನವಾದ ಜನರ ಗುಣ-ಸ್ವಭಾವ ಎಲ್ಲರಿಗೂ ವಿದಿತವಾಗುತ್ತದೆ ಹಾಗೂ ಎಲ್ಲರಿಗೂ ಸಂತೋಷದಾಯಕವಾಗಿರುತ್ತದೆ.

ಹಿಂದೆ ಚಂದ್ರಾತಪ ಎನ್ನುವ ಊರಲ್ಲಿ ಪಾರಾವಾರ ಎನ್ನುವ ಒಬ್ಬ ದೊರೆ ಇದ್ದ. ದೊರೆಗೆ ಪದ್ಮಾವತಿ ಎನ್ನುವ ಒಬ್ಬಳು ಮಗಳಿದ್ದಳು. ಅನುಪಮ ಸುಂದರಿಯೂ ಗುಣಶೀಲೆಯೂ ಆದ ಪದ್ಮಾವತಿ ಮದುವೆಯ ವಯಸ್ಸಿಗೆ ಬಂದಾಗ ದೊರೆ ತುಂಬ ಚಿಂತಾಕ್ರಾಂತನಾದ. 'ಈಕೆಗೆ ಅನುರೂಪನಾದ ವರ ಯಾರು? ಅವನನ್ನು ಎಲ್ಲಿ ಹುಡುಕುವುದು?' ಎನ್ನುವುದೇ ಅವನಿಗೆ ಸಮಸ್ಯೆಯಾಯಿತು. ಬಹಳ ಯೋಚನೆ ಮಾಡಿದ ನಂತರ ದೊರೆ ಸುಬುದ್ಧಿ ಎನ್ನುವ ವೃದ್ಧಜ್ಞಾನಿಯನ್ನು ಕರೆಸಿದ. ಏಕೆಂದರೆ,

'ಯಾವುದೇ ಇಚ್ಛಿತ ಕಾರ್ಯವನ್ನು ಮಾಡಬೇಕಾದರೂ ಮನುಷ್ಯ ಕೇವಲ ತನ್ನ ಆಲೋಚನೆಯನ್ನೇ ನಂಬಿ ದುಡುಕಬಾರದು: ಎಂಥ ವಿವೇಕಿಯೂ ಕೆಲವೊಮ್ಮೆ ಎಡವುತ್ತಾನೆ.'

ದೊರೆ ಸುಬುದ್ಧಿಯನ್ನು ಕುರಿತು, "ಪೂಜ್ಯರೇ, ನೀವು ನನ್ನ ಮಗಳನ್ನು ನೋಡಿದ್ದೀರಿ. ಅವಳಿಗೆ ತಕ್ಕ ವರ ಯಾರು? ಅವಳನ್ನು ನಾನು ಯಾರಿಗೆ ಮದುವೆ ಮಾಡಿಕೊಡಲಿ?" ಎಂದು ಕೇಳಿದ. ಅದಕ್ಕೆ ಸುಬುದ್ಧಿ,

"ದೊರೆಯೇ, ನಿನ್ನ ಚಿಂತೆಗೆ ಕಾರಣವೇ ಇಲ್ಲ. ಅವಳನ್ನು ಒಬ್ಬ ಪುರುಷನಿಗೆ ಕೊಟ್ಟು ಮದುವೆ ಮಾಡು" ಎಂದ.

"ಸ್ವಾಮಿ, ಅದಲ್ಲ. ಪುರುಷನಲ್ಲದವನಿಗೆ ನಾನು ಅವಳನ್ನು ಕೊಟ್ಟು ಮದುವೆ ಮಾಡುವುದು ಸಾಧ್ಯವಿಲ್ಲ ಎನ್ನುವುದು ನನಗೂ ತಿಳಿದಿದೆ."

"ಹಾಗಲ್ಲ. ಈ ಪ್ರಪಂಚದಲ್ಲಿ ಪುರುಷ ಲಕ್ಷಣ ಹೊತ್ತಿರುವ ಜನ ಬೇಕಾದ ಹಾಗೆ ಇದ್ದಾರೆ. ಅವರು ರೂಪಿನಲ್ಲಿ ಮಾತ್ರ ಪುರುಷರಷ್ಟೆ. ನೀನು ಅವಳನ್ನು ನಿಜವಾದ ಪುರುಷನಿಗೆ ಕೊಟ್ಟು ಮದುವೆ ಮಾಡು."

"ನಿಜವಾದ ಪುರುಷ ಯಾರು? ಅವನಲ್ಲಿ ಇರಬೇಕಾದ ಗುಣಗಳು ಯಾವುವು? ಇದನ್ನು ತಿಳಿಯುವುದು ಹೇಗೆ?"

"ದೊರೆಯೇ, ಅವನು ಎಂಥವನು, ಅವನ ಗುಣಗಳು ಯಾವುವು ಎಂದು ನಾನು ಹೇಳುತ್ತೇನೆ," ಎಂದು ಸುಬುದ್ಧಿ ಪ್ರಾರಂಭಿಸಿದ.

# ಉದಾತ್ತ ವೀರನ ಕತೆ

ಉಜ್ಜಯಿನಿ ಎಂಬ ಮಹಾನಗರದಲ್ಲಿ ವಿಕ್ರಮಾದಿತ್ಯ ಎನ್ನುವ ದೊರೆ ಇದ್ದ. ಅವನೊಂದು ಸಾರಿ ಒಡ್ಡೋಲಗದಲ್ಲಿ ಕೂತು ಗಾಯಕರ, ಕವಿಗಳ, ಶಾಸ್ತ್ರವೇತ್ತರ ವಾಚನ ಕೇಳುತ್ತಿದ್ದ. ಆಗ ಅಲ್ಲಿದ್ದ ಒಬ್ಬ ಕವಿ,

"ಬಲಾಹ ದೊರೆಗೆ ಜಯವಾಗಲಿ! ಅವನ ಔದಾರ್ಯ, ಕೊಡುಗೈ ನಡತೆ, ದೀನದಲಿತರಲ್ಲಿ ಅವನು ತೋರುವ ಪ್ರೀತಿ ಎಲ್ಲ ದೊರೆಗಳ ದಾರಿದೀಪವಾಗಲಿ, ಎಲ್ಲ ಧೀರರ ಆದರ್ಶವಾಗಲಿ," ಎಂದು ವಾಚನ ಮಾಡಿದ. ಇದನ್ನು ಕೇಳಿ ವಿಕ್ರಮಾದಿತ್ಯನಿಗೆ ತುಂಬ ಆಶ್ಚರ್ಯವಾಯಿತು: "ಅಯ್ಯಾ, ಕವಿವರ್ಯ, ಇದೇನಿದು? ಯಾರು ನಿನ್ನ ಈ ಬಲಾಹ? ನನ್ನೆದುರಿಗೇ ಅವನನ್ನು ನೀನು ಹೊಗಳುತ್ತಿದ್ದೀಯಲ್ಲ, ನಿನಗೆಷ್ಟು ಸೊಕ್ಕು?" ಎಂದ. ಅದಕ್ಕೆ ಆ ಕವಿ "ದೊರೆಯೇ, ನನ್ನ ವೃತ್ತಿಯೇ ಇದು. ಯಾರು ಧೀರರೋ ಅವರ ಗುಣಗಾನ ಮಾಡಿ, ಹಾಡಿ, ಅವರು ಎಲ್ಲ ಕಾಲಕ್ಕೂ ಎಲ್ಲರಿಗೂ ಆದರ್ಶ ಎಂದು ತೋರಿಸುವುದು ನನ್ನ ಕರ್ತವ್ಯ. ಇಂಥವರ ಚರಿತ್ರೆ ಉತ್ತಮರನ್ನು ಇನ್ನೂ ಉತ್ತಮರನ್ನಾಗಿಸುತ್ತದೆ; ನೀಚರನ್ನೂ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತದೆ." ಈ ಮಾತಿನಿಂದಲೂ ದೊರೆಯ ಕೋಪ ಕಮ್ಮಿಯಾಗಲಿಲ್ಲ. ಆಗ ಆ ಕವಿ, "ದೊರೆಯೇ, ನೀನು ಬಲಾಹನ ಸತ್ಕಾರ್ಯಕ್ಕಿಂತ ಹೆಚ್ಚಿನ ಸತ್ಕಾರ್ಯವನ್ನು ಸಾಧಿಸಿದರೆ, ನಾನು ನಿನ್ನನ್ನೂ ಹೀಗೇ ಹೊಗಳುತ್ತೇನೆ," ಎಂದ. "ನಿನ್ನ ಬಲಾಹ ದೊರೆಯ ಮಹಾ ಕಾರ್ಯಸಾಧನೆ ಏನು?" "ಓ, ದೊರೆಯೇ, ಬಲಾಹನ ಪರಿವಾರದವರು ಪ್ರತಿ ರಾತ್ರಿಯೂ ಅವನ ಅರಮನೆಯ ಮುಂದೆ ಒಂದು ಬಂಗಾರದ ದಿವ್ಯ ಹರ್ಮ್ಯವನ್ನು ಕಟ್ಟುತ್ತಾರೆ; ಪ್ರತಿ ದಿನ ಬೆಳಗ್ಗೆ ಆ ದಿವ್ಯವಾದ ಭವನವನ್ನು ಕೆಡವಿ, ಎಲ್ಲ ಬಂಗಾರದ ಚೂರುಗಳನ್ನು ದೊರೆ ಪ್ರಜೆಗಳಿಗೆ ಹಂಚಿ ಬಿಡುತ್ತಾನೆ. ಆದ್ದರಿಂದ ಅವನನ್ನು ಹೊಗಳದ ಜನವೇ ಅಲ್ಲಿ ಇಲ್ಲ." "ಇದು ನಿಜವೋ ಬರೀ ಕತೆಯೋ?" "ನಿನಗೆ ಅನುಮಾನವಿದ್ದಲ್ಲಿ ಇದನ್ನು ಪರೀಕ್ಷೆ ಮಾಡಿ ನೋಡಬಹುದು."

ಇಷ್ಟಾದ ನಂತರ ದೊರೆ ಸಭೆಯನ್ನು ವಿಸರ್ಜಿಸಿ ಸೆಜ್ಜೆಮನೆಗೆ ಹೋಗಿ 'ಈ ಬಲಾಹ ನಿಜವಾಗಿಯೂ ಉದಾತ್ತ ಮನುಷ್ಯ. ನಾನೇ ಹೋಗಿ ಇವನನ್ನು

ನೋಡಿ, ಪ್ರತ್ಯಕ್ಷವಾಗಿ ಪ್ರಮಾಣಿಸಿ ತಿಳಿದುಕೊಳ್ಳಬೇಕು,' ಎಂದು ಯೋಚಿಸಿ, ಮಾರನೇ ಬೆಳಗ್ಗೆ ರಾಜ್ಯಾಧಿಕಾರವನ್ನು ಯೋಗ್ಯ ಸಚಿವರುಗಳಿಗೆ ಒಪ್ಪಿಸಿ ಬಲಾಹ ರಾಜ್ಯದತ್ತ ಹೊರಟ. ಹೊರಡುವಾಗ ತನಗೆ ಸಿದ್ಧವಾಗಿದ್ದ ಅಗ್ನಿ ಮತ್ತು ಕೋಕಿಲ ಎಂಬ ಶಕ್ತಿಗಳನ್ನು ಜೊತೆಗೆ ಒಯ್ದ.

ಬಲಾಹ ದೊರೆಯ ರಾಜಧಾನಿಯನ್ನು ತಲುಪಿ, ಯೋಧನ ವೇಷ ತೊಟ್ಟು, ರಾಜನ ಮುಂದೆ ನಿಂತು ತಾನು ಸಾಹಸಾಂಕ ವಿಕ್ರಮಾದಿತ್ಯನ ಅರಮನೆಯ ಕಾವಲುಗಾರನಾಗಿದ್ದೆನೆಂದೂ ಆದರೆ ಈಗ ಬಲಾಹನ ಕೀರ್ತಿ ಯನ್ನು ಕೇಳಿ ಇಲ್ಲಿಯೇ ಆಶ್ರಯ ಪಡೆಯಲು ಬಂದಿದ್ದೇನೆಂದು ಬಿನ್ನವಿಸಿದ. ದೊರೆ, ''ಅಷ್ಟು ದೊಡ್ಡ ರಾಜನ ಅರಮನೆಯ ಕಾವಲುಗಾರನಾಗಿದ್ದೆಯೆಂದು ಹೇಳುತ್ತೀ ಆಯಿತು. ಅದೇ ಕೆಲಸವನ್ನು ನೀನು ನಮ್ಮಲ್ಲಿಯೂ ಮಾಡು.'' ಎಂದ.

ಮಾರನೆಯ ದಿನದಿಂದ ವಿಕ್ರಮಾದಿತ್ಯ ಅರಮನೆಯ ಮಹಾದ್ವಾರದಲ್ಲಿ ಕಾವಲುಗಾರನಾಗಿ ಕೆಲಸ ಮಾಡಲು ಪ್ರಾರಂಭಿಸಿದ ಮೊದಲ ನಡುರಾತ್ರಿ ಯಲ್ಲೇ ಅವನ ಕಣ್ಣೆದುರೇ ಅವನ ಆಸ್ಥಾನದ ಕವಿ ಹೇಳಿದ್ದ ಪವಾಡ ನಡೆಯಿತು: ಅವನು ನೋಡು ನೋಡುತ್ತಿದ್ದ ಹಾಗೆ ಒಂದು ಸುಂದರವಾದ ಬಂಗಾರದ ಭವನ ನಿರ್ಮಾಣವಾಯಿತು; ಬೆಳಗ್ಗೆ ಬಲಾಹನ ಆಗಮನದ ನಂತರ ಅದನ್ನು ಕೆಡವಿ, ಚೂರು ಚೂರು ಮಾಡಿ, ನೆರೆದಿದ್ದ ಎಲ್ಲ ಜನರಿಗೆ ಬಂಗಾರದ ವಿತರಣೆಯಾಯಿತು!

'ಇದು ಹೇಗೆ ಆಗುತ್ತದೆ? ಪರಮಾಶ್ಚರ್ಯ. ನನ್ನಲ್ಲಿಯೂ ಇಂಥ ಶಕ್ತಿ ಇಲ್ಲ. ಆದರೆ ಬಲಾಹ ಇದನ್ನು ಹೇಗೆ ಸಾಧ್ಯವಾಗಿಸಿಕೊಂಡಿದ್ದಾನೆ. ಬುದ್ಧಿವಂತನಾದ ಮನುಷ್ಯ ಸಾಧ್ಯತೆಗಳನ್ನು ಪರೀಕ್ಷೆ ಮಾಡಿ ತಿಳಿದುಕೊಳ್ಳದೆ ಇರಬಾರದು. ನಾನು ಇದನ್ನು ಪತ್ತೆ ಮಾಡುತ್ತೇನೆ,' ಎಂದು ಮನಸ್ಸಿನಲ್ಲೇ ನಿಶ್ಚಯಿಸಿಕೊಂಡ.

ಒಂದು ರಾತ್ರಿ, ನಗರವೆಲ್ಲ ನಿದ್ರಾವಶವಾಗಿದ್ದಾಗ, ಬಲಾಹ ದೊರೆ ಒಬ್ಬನೇ ಅರಮನೆಯಿಂದ ಹೊರಗಡೆ ಹೊರಡುತ್ತಿದ್ದದ್ದು ಅವನ ಕಣ್ಣಿಗೆ ಬಿತ್ತು. ನಿಶ್ಶಬ್ದವಾಗಿ ವಿಕ್ರಮಾದಿತ್ಯ ಅವನನ್ನು ಹಿಂಬಾಲಿಸಿದ. ದೊರೆ ಊರ ಆಚೆ, ನದಿಯ ದಂಡೆಯ ಮೇಲಿದ್ದ ಒಂದು ಭಯಾನಕವಾದ ಸ್ಮಶಾನವನ್ನು ಪ್ರವೇಶಿಸಿದ. ವಿಕ್ರಮಾದಿತ್ಯ ಅವನ ಹಿಂದೆಯೇ ನಡೆದು ಎಲ್ಲವನ್ನೂ ನೋಡುತ್ತಿದ್ದ:

ಸ್ಮಶಾನ ರುದ್ರ ಭಯಂಕರವಾಗಿತ್ತು. ಅಲ್ಲಿ ಇಲ್ಲಿ ಶವ ಸುಡಲೆಂದು ಹಾಕಿದ್ದ ಬೆಂಕಿ ಕ್ಷೀಣವಾಗಿ ಉರಿದು ಮಂಕು ಹಳದಿ ಜ್ವಾಲೆಗಳನ್ನು ಚೆಲ್ಲುತ್ತಿತ್ತು; ನಾಯಿ, ನರಿಗಳು ಊಳಿಡುತ್ತಿದ್ದುವು. ಭೂತಗಳು, ಶಾಕಿನಿ, ಡಾಕಿನಿಯರು ಡಮರುಗ ಬಾರಿಸಿ ಅಕರಾಳ ವಿಕರಾಳ ನೃತ್ಯ ಮಾಡುತ್ತಿದ್ದುವು.

ದೊರೆ ಮಾತ್ರ ನೇರ ನದಿಗೆ ನಡೆದು ಅಲ್ಲಿ ಸ್ನಾನ ಮಾಡಿದ ನಂತರ ಸ್ಮಶಾನದ ನಡುಗಡ್ಡೆಯಲ್ಲಿ ಬಂದು ನಿಂತ ಕೂಡಲೇ ಅಲ್ಲಿದ್ದ ಭೂತಗಳು ಅವನನ್ನು ಹಿಂಗಟ್ಟು ಮುಂಗಟ್ಟು ಕಟ್ಟಿ, ಎದುರಿಗೆ ಕೊತ ಕೊತ ಕುದಿಯುತ್ತಿದ್ದ ಎಣ್ಣೆಯ ಕೊಪ್ಪರಿಗೆಯಲ್ಲಿ ಅವನನ್ನು ಎಸೆದವು ಸಹಿಸಲಸಾಧ್ಯವಾದ ನೋವನ್ನು ಅನುಭವಿಸಿ ದೊರೆ ಅಲ್ಲಿಯೇ ತನ್ನ ಪ್ರಾಣತ್ಯಾಗ ಮಾಡಿದ. ತಕ್ಷಣ ದೇವಿ ಚಾಮುಂಡಿ ಸಾಕಾರರೂಪಿಣಿಯಾಗಿ ಆವಿರ್ಭವಿಸಿ, ಚೆನ್ನಾಗಿ ಬೆಂದು, ಗರಿಮುರಿಯಾಗಿದ್ದ ದೊರೆಯ ದೇಹದ ಮಾಂಸವನ್ನು ಅತ್ಯಾಶೆಯಿಂದ ಆಯ್ದು ಆಯ್ದು ತಿಂದಳು. ಅವಳ ಹಸಿವು ಶಮನವಾದ ನಂತರ, ಉಳಿದ ಮೂಳೆಗಳ ಚೂರನ್ನು ಒಟ್ಟುಗೂಡಿಸಿ ಅದರ ಮೇಲೆ ಜೀವಜಲವನ್ನು ಪ್ರೋಕ್ಷಿಸಿದಳು. ಬಲಾಹ ದೊರೆ ಮೊದಲಿದ್ದ ರೂಪಿನಲ್ಲೇ ಮತ್ತೆ ಜೀವತಳೆದು, ದೇವಿಯ ಕಾಲ ಮೇಲೆ ಬಿದ್ದು, "ದೇವಿ, ಬೇಡಿದವರಿಗೆ ಬೇಡಿದುದನ್ನು ಕೊಡಲಾಗದಿರುವುದೇ ಉದಾರಿಗಳಿಗೆ ಮಹಾ ಸಂಕಷ್ಟವನ್ನು ಉಂಟುಮಾಡುತ್ತದೆ ಹಾಗೆಂದೇ ನಾನು ನನ್ನ ದೇಹವನ್ನು ನಿನಗೆ ಆಹುತಿಯಾಗಿ ಅರ್ಪಿಸುತ್ತಿದ್ದೇನೆ ನಾನು ಎಂದೂ ದಾನ ಕೊಡುತ್ತಿರುವ ಹಾಗೆ ನೀನು ನನ್ನನ್ನು ಆಶೀರ್ವದಿಸಬೇಕು," ಎಂದು ಬೇಡಿ ಕೊಂಡ ದೇವಿ, "ಬಲಾಹ, ಎಂದಿನಂತೆ ನಾಳೆ ಬೆಳಗ್ಗೆಯೂ ನಿನ್ನ ಅರಮನೆಯ ಮುಂದೆ ಒಂದು ಬಂಗಾರದ ಅರಮನೆ ಇರುತ್ತದೆ," ಎಂದು ಆಶೀರ್ವದಿಸಿ ಅಂತರ್ಧಾನವಾದಳು

ವಿಕ್ರಮಾದಿತ್ಯ ಈ ಎಲ್ಲ ಸಂಗತಿಗಳನ್ನು ಕುರಿತು ಯೋಚಿಸುತ್ತ 'ನಿಜ, ನನ್ನ ಆಸ್ಥಾನದ ಕವಿ ಹೇಳಿದಂತೆ ಈ ಬಲಾಹ ಮಹಾ ಉದಾರಿ. ದಾನ ಮಾಡಲು ಸಾಧ್ಯವಾಗಲೆಂದೇ ಈತ ಪ್ರತಿ ನಿತ್ಯ ತನ್ನ ದೇಹವನ್ನು ಹೀಗೆ ಶಿಕ್ಷೆಗೆ ಒಳಪಡಿಸಿ ಕೊಳ್ಳುತ್ತಾನೆ ದೇವಿಯೂ ಪರಮಾಶ್ಚರ್ಯ ಕಾರಣಳು: ಎಷ್ಟು ಭಯಂಕರಳೋ ಅಷ್ಟೇ ಕೃಪಾಳು. ಆದರೆ ಆಕೆ ದೊರೆಗೆ ಒಂದೇ ಸಾರಿ ಅವನ ಎಲ್ಲ ಅಭೀಷ್ಟವನ್ನು ಏಕೆ ನಿವಾರಿಸುವುದಿಲ್ಲ? ನಾಳೆ ಇದರ ಬಗ್ಗೆ ಸರಿಯಾಗಿ ಯೋಚನೆ ಮಾಡಿ, ಕಾರ್ಯೋನ್ಮುಖನಾಗಬೇಕು' ಎಂದುಕೊಂಡ.

ಮಾರನೆಯ ದಿನ ಬಲಾಹ ಬಲು ಹೊತ್ತಿನ ವರೆಗೂ ರಾಜಕಾರ್ಯದಲ್ಲಿ ತೊಡಗಿದ್ದ. ನಗರವಾಸಿಗಳೆಲ್ಲ ನಿದ್ದೆ ಹೋಗಿದ್ದರು. ವಿಕ್ರಮಾದಿತ್ಯ ನೇರವಾಗಿ ಸ್ಮಶಾನದತ್ತ ನಡೆದು, ನದಿಯಲ್ಲಿ ಸ್ನಾನ ಮಾಡಿ, ಸ್ವಯಮಿಚ್ಛೆಯಿಂದಲೇ ಕುದಿಯುತ್ತಿದ್ದ ಎಣ್ಣೆಯ ಕೊಪ್ಪರಿಗೆಗೆ ಹಾರಿದ. ಅವನ ದೇಹ ಅದರಲ್ಲಿ ಬೇಯುತ್ತಿದ್ದಂತೆ, ಚಾಮುಂಡಿ ಆವಿರ್ಭವಿಸಿ, ದೇಹದ ಬೆಂದ ಮಾಂಸವನ್ನು ಭಕ್ಷಿಸಿ, ನಂತರ ಮೂಳೆಗಳನ್ನು ಒಟ್ಟುಗೂಡಿಸಿ ಜೀವಜಲ ಪ್ರೋಕ್ಷಿಸಿದಳು. ತಾನು ತಿಂದವನು ಬಲಾಹ ಎಂದೇ ತಿಳಿದು ದೇವಿ ಅವನ ಇಚ್ಛೆಯನ್ನು ಪೂರೈಸಲು ಕೈ ಎತ್ತುತ್ತಿದ್ದ ಹಾಗೆ, ವಿಕ್ರಮಾದಿತ್ಯ ಮತ್ತೆ ಆ ಕಾದ ಬಾಣಲಿ ಯೊಳಗೆ ಧುಮುಕಿದ. ದೇವಿ ಮತ್ತೆ ಅವನ ಮಾಂಸ ಭಕ್ಷಣೆ ಮಾಡಿದಳು. ಜೀವ ಬಂದ ಕೂಡಲೇ ಮತ್ತೆ ವಿಕ್ರಮಾದಿತ್ಯ ಅದೇ ಬಾಣಲೆಯೊಳಗೆ ಹಾರಿದ ಮತ್ತೆ ಇದೆಲ್ಲದರ ಪುನರಾವೃತ್ತಿಯಾಗುತ್ತಿದ್ದಂತೆ ದೇವಿಗೆ ಈತ ವಿಕ್ರಮಾದಿತ್ಯ ಎಂದು ತಿಳಿಯಿತು: "ದೊರೆಯೇ ನಿನಗೆ ಸಿದ್ಧಿಸದೇ ಇರುವ ಶಕ್ತಿಯೇ ಇಲ್ಲ. ಹಾಗಿದ್ದೂ ಏಕೆ ಸಾಹಸ? ಏಕೆ ಈ ಧೈರ್ಯದ ಪ್ರದರ್ಶನ? ನನಗೆ ಮಾಂಸ ಭಕ್ಷಣದ ಆಶೆ ಇಲ್ಲ. ಅದು ತೋರಿಕೆಗೆ ಮಾತ್ರ; ಪುರುಷನ ಧೈರ್ಯ ಪರೀಕ್ಷೆಗಷ್ಟೆ. ಆಯಿತು, ನಿನಗೇನು ಬೇಕು? ಕೇಳು".

"ಭಗವತಿ, ಕೃಪಾಮಯಿ, ನನ್ನಿಚ್ಛೆ ಇಷ್ಟೆ. ಬಲಾಹ ಪ್ರತಿರಾತ್ರಿಯೂ ಪ್ರಾಣಸಂಕಟವನ್ನು ಅನುಭವಿಸುತ್ತಾನೆ. ಅದನ್ನು ನೋಡಿ ನನ್ನ ಹೃದಯ ಸಂತಾಪದಲ್ಲಿ ನರಳುತ್ತದೆ ನಾನದನ್ನು ಸಹಿಸಲಾರೆ. ಆದ್ದರಿಂದ ಈ ದುರ್ಭರ ತ್ಯಾಗದ ಆಗತ್ಯವಿಲ್ಲದಂತೆ, ಅವನ ಅರಮನೆಯ ಮುಂದೆ ಪ್ರತಿ ಬೆಳಿಗ್ಗೆ ಒಂದು ಬಂಗಾರದ ಭವನ ಇರುವಂತೆ ಅನುಗ್ರಹಿಸು" ಎಂದು ಕೇಳಿದ. ದೇವಿ 'ತಥಾಸ್ತು' ಎಂದು ಅಂತರ್ಧಾನವಾದಳು. ವಿಕ್ರಮಾದಿತ್ಯ ತನ್ನ ಶಕ್ತಿಗಳ ಸಹಾಯದಿಂದ ಉಜ್ಜಯಿನಿಗೆ ವಾಪಸ್ಸಾದ.

ಆ ರಾತ್ರಿ ಬಲಾಹ ತನ್ನ ಪದ್ಧತಿಯಂತೆ ಸ್ಮಶಾನದತ್ತ ತೆರಳಿದ. ಆಶ್ಚರ್ಯ! ಅಲ್ಲಿ ಭೂತ ಬೇತಾಳಗಳಾಗಲಿ, ಶಾಕಿನಿ ಡಾಕಿನಿಯರಾಗಲೀ ಯಾರೂ ಕಾಣಲಿಲ್ಲ. ಎಣ್ಣೆಯ ಕೊಪ್ಪರಿಗೆಯೂ ಇರಲಿಲ್ಲ! ದೊರೆಗೆ ಏನು ಮಾಡುವು ದೆಂದೇ ತಿಳಿಯದೇ ದಿಕ್ಕುಗೆಟ್ಟಂತೆ ನಿಂತ. ಆಗ ಅಶರೀರವಾಣಿ ನುಡಿಯಿತು: "ಬಲಾಹ, ನಿನ್ನ ಸಂಕಟವನ್ನು ವಿಕ್ರಮಾದಿತ್ಯ ನಿವಾರಿಸಿದ್ದಾನೆ". ದೊರೆಗೆ ವಾಣಿಯ ಪೂರ್ಣ ಅರ್ಥ ತಿಳಿಯಲಿಲ್ಲ. ಯಾವ್ಯಾವುದೋ ಅನುಮಾನಗಳು ಬಂದುವು. 'ನಾಳೆ ನಾನು ದಾನ ಕಾರ್ಯ ನಡೆಸುವುದು ಹೇಗೆ?' ಎನ್ನುವ

ಯೋಚನೆಯಲ್ಲೇ ಅವನು ರಾತ್ರಿಯನ್ನೆಲ್ಲಾ ನಿದ್ರಾಹೀನನಾಗಿ ಕಳೆದ. ಬೆಳಗಿನ ಝಾವ ಅವನಿನ್ನೂ ಅರೆ ಎಚ್ಚರದಲ್ಲಿರುವಾಗ ದೂತರು ಬಂದು ಬಂಗಾರದ ಭವನ ನಿರ್ಮಾಣವಾಗಿದೆ ಎಂದು ಸುದ್ದಿ ಕೊಟ್ಟರು. ಆಗ ಅವನಿಗೆ ತಿಳಿಯಿತು. ವಿಕ್ರಮಾದಿತ್ಯನ ಅಪೂರ್ವ ಔದಾರ್ಯದಿಂದ, ಅವನ ಉದಾತ್ತ ನಡವಳಿಕೆ ಯಿಂದ ತನಗೆ ನಿತ್ಯ ಸಾವಿನ ಸಂಕಟ ತಪ್ಪಿತು ಎನ್ನುವುದರ ಅರಿವಾಯಿತು. ಇದೆಲ್ಲವನ್ನೂ ಕೇಳಿ ತಿಳಿದ ಆ ಆಸ್ಥಾನ ಕವಿ ಹೀಗೆ ಹಾಡಿದ: "ನಿಜವಾದ ಗಂಡಸರ ಮೊದಲ ಪಂಕ್ತಿಯಲ್ಲಿರುವವನು ನಮ್ಮ ವಿಕ್ರಮಾದಿತ್ಯ ದೊರೆ. ಅವನ ಕರುಣೆ, ಅವನ ಧೈರ್ಯ, ಅವನ ತ್ಯಾಗ ಎಲ್ಲರಿಗೂ ಆದರ್ಶ, ದಾರಿದೀಪ".

# ಹಮ್ಮೀರ ದೇವನ ಕತೆ

ಅನುಕಂಪ ಇರುವ ಮನುಷ್ಯ ಪೂಜಾರ್ಹ. ಎಲ್ಲ ಜೀವಿಗಳೂ ಇವನಿಂದ ಉಪಕೃತರಾಗುತ್ತಾರೆ. ಇಂಥವನ ಆರಾಧನೆ ಸಕಲ ಸಂಪತ್ತನ್ನೂ ಉಂಟುಮಾಡುತ್ತದೆ:

ಕಾಳಿಂದೀ ನದಿಯ ದಡದಲ್ಲಿ ಯೋಗಿನಾಪುರ ಎಂಬುದೊಂದು ಊರು ಅದರ ಪ್ರಭುತ್ವ ಸುಲ್ತಾನ್ ಅಲ್ಲಾವುದ್ದೀನನದು ಒಂದು ಸಾರಿ ಸುಲ್ತಾನ ತನ್ನ ಸೇನಾಧಿಪತಿಗಳಲ್ಲಿ ಒಬ್ಬನಾದ ಮಹಿಮಶಾಹಿ ಎಂಬುವನ ಬಗ್ಗೆ ಅನುಮಾನ ತಳೆದು ಕ್ರೋಧೋದ್ದೀಪಿತನಾದ ಕ್ರೋಧದಲ್ಲಿ ತನ್ನ ದೊರೆ ಏನು ಮಾಡಬಲ್ಲ ಎಂದು ತಿಳಿದಿದ್ದ ಮಹಿಮಶಾಹಿ ಇನ್ನು ಅಲ್ಲಿ ಉಳಿಯುವುದು ಕ್ಷೇಮವಲ್ಲ ಎನ್ನುವ ತೀರ್ಮಾನಕ್ಕೆ ಬಂದ.

'ರಾಜರು, ಗೂಢಚಾರರು ಮತ್ತು ಸರ್ಪಗಳನ್ನು ಎಂದೂ ನಂಬ ಬಾರದು; ಏಕೆಂದರೆ ಕೋಪದಲ್ಲಿ, ಅವರು ಯೋಚನೆ ಮಾಡದೆ, ಜೀವಹತ್ಯೆ ಮಾಡುತ್ತಾರೆ

ತಾನಿನ್ನೂ ಸ್ವತಂತ್ರವಾಗಿರುವಾಗಲೇ ಎಲ್ಲಿಯಾದರೂ ಕ್ಷೇಮವಾದ ಸ್ಥಳಕ್ಕೆ ತನ್ನ ಸಂಸಾರ ಸಮೇತ ತಪ್ಪಿಸಿಕೊಂಡು ಹೋಗುವುದು ಒಳ್ಳೆಯದು,' ಎಂದು ಅವನು ಯೋಚಿಸಿದ. ಸಂಸಾರ ಸಮೇತ ಏಕೆಂದರೆ, 'ತನ್ನ ಜೀವ ಉಳಿಸಿ ಕೊಳ್ಳಲು, ತನ್ನ ಸಂಸಾರವನ್ನು ತೊರೆದು ಓಡಿ ಹೋಗುವ ವ್ಯಕ್ತಿಯ ಬದುಕಿಗೆ ಏನು ಬೆಲೆ? ಅವನು ಸತ್ತಂತೆಯೇ ಸರಿ.'

ಹೀಗೆ ಯೋಚಿಸಿ ಮಹಿಮಶಾಹಿ ತನ್ನ ಅನುಕಂಪ ಸ್ವಭಾವಕ್ಕೆ ಖ್ಯಾತನಾದ ಹಮ್ಮೀರ ದೇವನ ಬಳಿ ಹೋಗಿ, "ರಾಜನ್, ನನ್ನ ಪ್ರಭುವಿನ ಭಯದಿಂದ ನಾನು ನಿನ್ನಲ್ಲಿ ಶರಣಾಗತನಾಗಿ ಬಂದಿದ್ದೇನೆ. ನಿನಗೆ ನನಗೆ ರಕ್ಷಣೆ ಕೊಡುವ ಮನಸ್ಸಿದ್ದರೆ ಹೇಳು. ನಿನ್ನನ್ನು ನಂಬಿ ಇಲ್ಲಿ ಉಳಿಯುತ್ತೇನೆ. ಇಲ್ಲ, ಬೇರೆ ಎಲ್ಲಾದರೂ ಪ್ರಯತ್ನ ಮಾಡುತ್ತೇನೆ," ಎಂದ.

"ಅಯ್ಯಾ, ನಾನು ಬದುಕಿರುವವರೆಗೂ, ಸುಲ್ತಾನನೇಕೆ, ಯಮನೂ ನಿನ್ನನ್ನು ಕೊಂಡೊಯ್ಯಲು ನಾನು ಬಿಡುವುದಿಲ್ಲ. ಆದ್ದರಿಂದ ನೀನು ನಿಶ್ಚಿಂತನಾಗಿ ಇಲ್ಲಿ ಉಳಿಯಬಹುದು," ಎಂದ.

ರಾಜನ ಮಾತಿನಲ್ಲಿ ನಂಬಿಕೆ ಇರಿಸಿ ಮಹಿಮಶಾಹಿ ರಣಸ್ತಂಭ ನಗರದಲ್ಲಿ ನಿರಾತಂಕವಾಗಿ ವಾಸಿಸತೊಡಗಿದ. ಸ್ವಲ್ಪ ಕಾಲದಲ್ಲಿ ಈತ ಇಲ್ಲಿ ಆಶ್ರಯ ಪಡೆದಿರುವ ಸುದ್ದಿ ಅಲ್ಲಾವುದ್ದೀನ್‌ನನ್ನು ತಲುಪಿತು. ಮರುಗಳಿಗೆಯಲ್ಲೇ ಅಲ್ಲಾವುದ್ದೀನ್ ತನ್ನ ಸೈನ್ಯವನ್ನೂ ರಾವುತರನ್ನೂ ಗಜದಳವನ್ನೂ ತೆಗೆದು ಕೊಂಡು, ಹಮ್ಮೀರನ ಕೋಟೆಗೆ ಮುತ್ತಿಗೆ ಹಾಕಿದ. ಹಮ್ಮೀರನೂ ಕೋಟೆ ಯನ್ನು ಭದ್ರಪಡಿಸಿ, ಅಗಳಿನಲ್ಲಿ ಚೂಪಾದ ಭಲ್ಲೆಗಳನ್ನು ಅಡಗಿಸಿ, ಉಳಿದೆಲ್ಲ ಸಿದ್ಧತೆಗಳನ್ನೂ ಮಾಡಿದ. ಮೊದಲನೆಯ ದಿನದ ಕಾಳಗದ ನಂತರ ಸುಲ್ತಾನ್ ಅಲ್ಲಾವುದ್ದೀನ್, "ಹೋ ರಾಜ ಹಮ್ಮೀರ, ನನಗೆ ದ್ರೋಹ ಬಗೆದಿರುವ ಮಹಿಮಶಾಹಿಯನ್ನು ನನಗೆ ಒಪ್ಪಿಸು. ಇಲ್ಲದಿದ್ದಲ್ಲಿ ನಾಳೆಯ ಹೊತ್ತಿಗೆ ನಿನ್ನ ಕೋಟೆಯನ್ನೂ, ಅರಮನೆಯನ್ನೂ ನುಚ್ಚುನೂರು ಮಾಡಿ, ಮಹಿಮಶಾಹಿ ಯನ್ನು ಯಮನ ಪಟ್ಟಣಕ್ಕೆ ಅಟ್ಟುತ್ತೇನೆ" ಎಂದು ಹೇಳಿ ಕಳಿಸಿದ ಹಮ್ಮೀರ ದೇವ, "ನಮ್ಮಲ್ಲಿ ಆಶ್ರಯ ಪಡೆದಿರುವವರನ್ನು ನಾನೆಂದೂ ಬಿಟ್ಟುಕೊಡು ವವನಲ್ಲ. ನಾನು ಕಾಳಗಕ್ಕೆ ಸಿದ್ಧ" ಎಂದು ಪ್ರತಿಯಾಗಿ ಹೇಳಿ ಕಳಿಸಿದ.

ಇಬ್ಬರ ನಡುವಣ ಯುದ್ಧ ಮೂರು ವರ್ಷಕಾಲ ನಡೆಯಿತು. ಅಲ್ಲಾವುದ್ದೀನನ ಸೇನೆಯ ಸಂಖ್ಯೆ ಅದರ ಅರ್ಧಕ್ಕೆ ಇಳಿಯಿತು; ಕೋಟೆ ಇನ್ನೂ ಸುಭದ್ರವಾಗಿಯೇ ಇತ್ತು. ಅಲ್ಲಾವುದ್ದೀನ್ ಹಿಂತಿರುಗುವ ಯೋಚನೆ ಮಾಡು ತ್ತಿದ್ದ ಆ ಸಮಯದಲ್ಲಿ ಹಮ್ಮೀರನ ಇಬ್ಬರು ದುಷ್ಟ ಸಚಿವರು ಬಂದು ಊರಿನಲ್ಲಿ ಕ್ಷಾಮ ಉಲ್ಬಣಿಸಿದ್ದಾಗಿಯೂ, ಇನ್ನೊಂದೆರಡು ದಿನದಲ್ಲಿ ಕೋಟೆ ಅವನ ಕೈವಶವಾಗುವುದೆಂದೂ ತಿಳಿಸಿದರು. ಅಲ್ಲಾವುದ್ದೀನ್ ಇದರಿಂದ ಸುಪ್ರೀತನಾಗಿ ತನ್ನ ಸೇನೆಯನ್ನು ಇನ್ನಷ್ಟು ಬಲಗೊಳಿಸಿ ಕೋಟೆಯನ್ನು ದಿಗ್ಬಂಧಿಸಿಟ್ಟ.

ತನ್ನ ಹದಗೆಟ್ಟ ಪರಿಸ್ಥಿತಿಯ ಅರಿವಿದ್ದ ಹಮ್ಮೀರ ದೇವ ತನ್ನ ಸಚಿವರು ಗಳನ್ನು ಕರೆದು, "ಮಾನ್ಯರೇ, ನಮ್ಮಲ್ಲಿ ಆಶ್ರಯ ಪಡೆದ ಒಬ್ಬನ ಬಗ್ಗೆ ನಾನು ಅನುಕಂಪ ತೋರಿಸಿದೆ. ಅದರಿಂದ ಈ ಯುದ್ಧ ಸಂಘಟಿಸಿದೆ. ನಾನು ನಾಳೆ ಕೋಟೆಯಿಂದ ಹೊರಗೆ ಹೋಗಿ ಅಲ್ಲಾವುದ್ದೀನ್‌ನ ಸೇನೆಯನ್ನು ಆಕ್ರಮಿಸುವ

ಯೋಚನೆ ಮಾಡಿದ್ದೇನೆ. ಇದು ತಪ್ಪು ಎಂದು ನಿಮಗೆ ಅನ್ನಿಸಿದರೆ ನೀವು ಯುದ್ಧದಿಂದ ವಿರಮಿಸಿ ಬೇರೆಡೆ ಹೋಗಬಹುದು," ಎಂದ.

"ದೊರೆಯೇ, ನಾವು ನಿಮ್ಮ ಉಪ್ಪುಂಡವರು. ನಾವು ನಿಮ್ಮ ಜೊತೆಯೇ ಇರುವವರು. ಆದರೆ ಈ ಯುದ್ಧ ನಿಮ್ಮಲ್ಲಿ ಆಶ್ರಯ ಬೇಡಿ ಬಂದವನ ರಕ್ಷಣೆಗಾಗಿ ಆರಂಭವಾಗಿದೆ. ಆದ್ದರಿಂದ ಆತನನ್ನು ಬೇರೆ, ಹೆಚ್ಚು ಸುರಕ್ಷಿತ ಜಾಗಕ್ಕೆ ಕಳಿಸಿ. ಅದರಿಂದ ತಮ್ಮ ಉದ್ದೇಶ ಸಫಲವಾಗುತ್ತದೆ."

ಆಗ ಮಹಿಮಶಾಹಿ, "ಪ್ರಭೂ, ನನ್ನ ಒಬ್ಬನ ರಕ್ಷಣೆಗಾಗಿ ನಿಮ್ಮದೆಲ್ಲ ವನ್ನೂ ಏಕೆ ಕಳೆದುಕೊಳ್ಳುತ್ತೀರಿ. ನಿಮ್ಮ ರಾಜ್ಯ, ನಿಮ್ಮ ಪತ್ನಿ ಮಕ್ಕಳು ಇವರನ್ನೆಲ್ಲ ಏಕೆ ಬಲಿಗೊಡುತ್ತೀರಿ. ನನ್ನನ್ನು ಸುಲ್ತಾನನಿಗೆ ಒಪ್ಪಿಸಿ ಬಿಡಿ," ಎಂದ.

ಹಮ್ಮೀರ ದೇವ, "ಅಯ್ಯೋ, ಈ ಶರೀರದ ಆಯುರ್ಮಾನ ಎಷ್ಟು? ಚಿರಂತನವಾಗಿ ಉಳಿಯುವ ಕೀರ್ತಿಯನ್ನು ಬಿಟ್ಟು ಈ ದೇಹವನ್ನು ಯಾರು ಉಳಿಸಿಕೊಳ್ಳುವ ಯೋಚನೆ ಮಾಡುತ್ತಾರೆ," ಎಂದು ಉತ್ತರಿಸಿದ.

ನಂತರ, "ಬೇಕಾದರೆ ನಿನ್ನನ್ನು ಹೆಚ್ಚು ಸುರಕ್ಷಿತವಾಗಿರುವ ಸ್ಥಳಕ್ಕೆ ನಾನು ಕಳಿಸಿಕೊಡುತ್ತೇನೆ," ಎಂದ.

"ದೊರೆಯೇ, ಹಾಗೆನ್ನಬೇಡಿ. ನಾನು ನಿಮ್ಮೆಲ್ಲರಿಗಿಂತ ಮುಂದಾಗಿ ಖಡ್ಗ ಹಿರಿದು ಹೋರಾಡುತ್ತೇನೆ ಸ್ತ್ರೀಯರನ್ನು ಮಾತ್ರ ಬೇರೆಡೆಗೆ ಕಳಿಸಿಬಿಡುವ ಯೋಚನೆ ಮಾಡಿ."

ಆಗ ಸ್ತ್ರೀಯರು, "ನಮ್ಮ ಗಂಡಂದಿರು ಯುದ್ಧಭೂಮಿಯನ್ನು ಆರಿಸಿ ಕೊಂಡಾಗ, ನಾವು ಅಗ್ನಿಕುಂಡದಲ್ಲಿ ನಮ್ಮನ್ನು ಆರಿಸಿಕೊಳ್ಳುತ್ತೇವೆ," ಎಂದು ಹೇಳಿ ಹೊರಟು ಹೋದರು.

ಮಾರನೆಯ ಬೆಳಗ್ಗೆ ಘೋರವಾದ ಯುದ್ಧ ನಡೆಯಿತು. ಹಮ್ಮೀರ ದೇವ ಧುರಧೀರನಾಗಿ ಮೆರೆದ. ನಂತರ ಅದೇ ರಣಭೂಮಿಯಲ್ಲೇ ಅನೇಕ ವೀರಕೃತ್ಯಗಳ ನಂತರ ತನ್ನ ವೀರ ಸಾವನ್ನೂ ಅಪ್ಪಿದ.

ಸುಂದರವಾದ ಅರಮನೆಗಳನ್ನೂ, ಪ್ರೀತಿಸುವ ಕುಟುಂಬ ಜನರನ್ನೂ, ಅಗಾಧ ಐಶ್ವರ್ಯವನ್ನೂ, ಆನೆ ಕುದುರೆ ಸೈನ್ಯ ಬಲವನ್ನೂ ಹಮ್ಮೀರ ದೇವ ಒಬ್ಬನಿಗಾಗಿ ಅನುಕಂಪದಿಂದ ಪ್ರೇರಿತನಾಗಿ ತ್ಯಜಿಸಿದ. ಇನ್ನೊಬ್ಬರಿಗಾಗಿ ಯಾರು ಇಂಥ ಒಂದನ್ನಾದರೂ ತ್ಯಜಿಸುತ್ತಾರೆ? ಹಮ್ಮೀರ ದೇವ ಈ ಅದ್ಭುತವನ್ನು ಮಾಡಿ ತೋರಿಸಿ ಅಜರಾಮರ ಕೀರ್ತಿಯನ್ನು ಗಳಿಸಿದ.

# ಒಬ್ಬ ಚೋರನ ಕತೆ

ವಿವೇಚನಾ ಶಕ್ತಿ ಇಲ್ಲದ ಮನುಷ್ಯ ಕಳ್ಳನಾಗುತ್ತಾನೆ; ಶೌರ್ಯ ಇಲ್ಲದವನು ಹೇಡಿಯಾಗುತ್ತಾನೆ; ಶಕ್ತಿ ರಹಿತನಾದವನು ಸೋಮಾರಿಯಾಗುತ್ತಾನೆ.

ತಿಳುವಳಿಕೆಯಿಂದ ಅನುಕಂಪ, ಔದಾರ್ಯ ಇತ್ಯಾದಿಗಳು ಪ್ರಾಪ್ತವಾಗುತ್ತವೆ; ಇವು ಯಾವುವೂ ಇಲ್ಲದೇ ಬರಿಯ ಶೌರ್ಯ ಒಂದೇ ಇದ್ದರೆ ಅದು ಅವನನ್ನು ಅಧರ್ಮಕ್ಕೆ ನಡೆಸುತ್ತದೆ.

ತಿಳುವಳಿಕೆ ಇಲ್ಲದೇ ಬರೀ ಶೌರ್ಯವೊಂದೇ ಇದ್ದ ಚೋರ ಸರೀಸೃಪನ ಹಾಗೆ ಅವನು ಪಾಪಕಾರ್ಯದಲ್ಲೇ ನಿಲ್ಲುತ್ತಾನೆ; ಪುಣ್ಯ ಕೆಲಸಕ್ಕೆ ಅವಕಾಶ ವಿದ್ದರೂ ಅವನು ಅದನ್ನು ಮಾಡುವುದಿಲ್ಲ.

ಹಿಂದೆ ಉಜ್ಜಯಿನಿಯಲ್ಲಿ ವಿಕ್ರಮಾದಿತ್ಯ ಎಂಬ ದೊರೆ ಇದ್ದ. ತನ್ನ ರಾಜ್ಯದ ಚೋರರು ಹೇಗೆ ತಮ್ಮ ಕಾರ್ಯಸಾಧಿಸಿಕೊಳ್ಳುತ್ತಾರೆ ಎಂದು ತಿಳಿಯುವ ಕುತೂಹಲ ಅವನಿಗೆ ಒಮ್ಮೆ ಬಂತು. ಬಂದದ್ದೇ ಅವನು ಒಬ್ಬ ಭಿಕ್ಷುಕನ ವೇಷ ಧರಿಸಿ, ಊರ ದೇವಸ್ಥಾನದ ಬಳಿ ಕಾದು ಕುಳಿತುಕೊಂಡ. ಸರಿರಾತ್ರಿ ಕಳೆದ ಮೇಲೆ ನಾಲ್ವರು ಕಳ್ಳರು ಅಲ್ಲಿಗೆ ಬಂದು, ತಾವು ಮನೆಯಿಂದ ತಂದಿದ್ದ ಆಹಾರವನ್ನು ತಿಂದು ತಮ್ಮ ಮುಂದಿನ ಕಾರ್ಯಾಚರಣೆಗೆ ಸಿದ್ಧವಾದರು. ಆಗ ವಿಕ್ರಮಾದಿತ್ಯ ಅವರ ಬಳಿ ಬಂದು ತನಗೂ ಇಷ್ಟು ಆಹಾರ ಬೇಕು ಎಂದು ಬೇಡಿದ. ಕಳ್ಳರು ಅನುಮಾನದಿಂದ ಅವನ ಪೂರ್ವೋತ್ತರವನ್ನು ವಿಚಾರಿಸಿದರು. ವಿಕ್ರಮಾದಿತ್ಯ, "ನಾನೊಬ್ಬ ಭಿಕ್ಷುಕ. ಹಸಿವಿನಿಂದ ಕಂಗೆಟ್ಟಿದ್ದೇನೆ. ಹಾಗಾಗಿ ಇಲ್ಲೇ ಉಳಿದೆ," ಎಂದ. ಕಳ್ಳರು ತಮ್ಮಲ್ಲೇ ಚರ್ಚಿಸಿಕೊಳ್ಳುತ್ತಿದ್ದಾಗ ಒಬ್ಬ, "ಬೆಳಗ್ಗೆ ನಾವು ನಗರದ ದಾರಿಗಳನ್ನು ಗುರುತಿಟ್ಟುಕೊಳ್ಳಲು ಓಡಾಡುತ್ತಿದ್ದಾಗ, ಇವನನ್ನು ನೋಡಿದೆವು," ಎಂದ. ಇನ್ನೊಬ್ಬ, "ನಾವು ನಿನಗೆ ತಿನ್ನಲು ಏನಾದರೂ ಕೊಟ್ಟರೆ ಅದಕ್ಕೆ ಪ್ರತಿಯಾಗಿ ನೀನೇನು ಮಾಡಬಲ್ಲೆ," ಎಂದು ಕೇಳಿದ.

"ನಾನು ನಿಮಗೆ ಲಕ್ಷಾಧಿಪತಿಯೊಬ್ಬನ ಮನೆಯನ್ನು ತೋರಿಸುತ್ತೇನೆ. ಜೊತೆಗೆ ನೀವು ಅಪಹರಿಸಿದ ವಸ್ತುವನ್ನು ನೀವು ಹೇಳಿದೆಡೆಗೆ ಹೊತ್ತು

ತರಬಲ್ಲೆ.'' ''ಒಳ್ಳೆಯದು. ನಮ್ಮ ಊಟ ಮುಗಿಯಲಿ. ಉಳಿದದ್ದು ನಿನಗೆ,'' ಎಂದು ಅವರು ಉಂಡು ಮಿಕ್ಕದ್ದನ್ನು ದೊರೆಗೆ ನೀಡಿದರು. ದೊರೆ ಅದನ್ನು ತನ್ನ ಸಿದ್ಧಶಕ್ತಿಯ ಮೂಲಕ ಮಾಯವಾಗುವಂತೆ ಮಾಡಿ, ಉಂಡಂತೆ ನಟಿಸಿದ.

ಚೋರರ ನಾಯಕನಾದ ಸರೀಸೃಪ ನರಿಯೊಂದು ಊಳಿಡುವುದನ್ನು ಕೇಳಿ, ''ಮಿತ್ರರೇ, ಈ ನರಿಗಳ ಭಾಷೆ ನನಗೆ ಗೊತ್ತು. ಅವು ನಮ್ಮೊಡನೆ ಈಗ ಒಬ್ಬ ರಾಜನೂ ಇದ್ದಾನೆ, ಎನ್ನುತ್ತಿವೆ'', ಎಂದ. ಅದಕ್ಕವರು, ''ತೆಗಿ, ತೆಗಿ ಇಲ್ಲಿ ಇರುವ ನಾವು ನಾಲ್ಕು ಜನವೂ ಚೋರರು. ಒಬ್ಬರಿಗೊಬ್ಬರು ತಿಳಿದವರು. ಇವನೋ ಭಿಕ್ಷುಕ. ನಾವು ಹಗಲಿನಲ್ಲಿ ಕಂಡವನು. ನಮ್ಮ ಉಚ್ಛಿಷ್ಟವನ್ನು ತಿಂದವನು. ಇವನೆಂಥ ರಾಜನಾದಾನು?'' ''ಆದರೆ ನರಿಗಳು ಎಂದೂ ಸುಳ್ಳನ್ನು ಹೇಳುವುದಿಲ್ಲ.'' ''ಪ್ರತ್ಯಕ್ಷವೇ ಪ್ರಮಾಣ. ನಮ್ಮ ಕಣ್ಣೆದುರಿಗೆ ನಾವು ಎಲ್ಲ ನೋಡುತ್ತಿದ್ದೇವೆ. ಆದ್ದರಿಂದ ವಿನಾ ಕಾರಣ ಅನುಮಾನ ಪಡುವುದು ಸರಿಯಲ್ಲ,'' ಎಂದು ಉಳಿದವರು ಹೇಳಿದರು.

ನಂತರ ಅವರು ನಗರದ ಒಳಕ್ಕೆ ಹೋಗಿ, ಪುರಪತಿ ಎನ್ನುವ ಧನಾಢ್ಯನ ಮನೆಗೆ ಕನ್ನ ಹಾಕಿ ಅಪಾರವಾದ ಬೆಲೆ ಬಾಳುವ ವಸ್ತುಗಳನ್ನು ದೋಚಿ, ಊರ ಹೊರಗಡೆ ಒಂದು ಗುಪ್ತಸ್ಥಾನದಲ್ಲಿ ಬಚ್ಚಿಟ್ಟರು. ಆಮೇಲೆ ನಾಲ್ವರು ಊರ ಕೊಳದಲ್ಲಿ ಸ್ನಾನ ಮಾಡಿ, ನಾಗರಿಕರಂತೆ ಅಡ್ಡಾಡಿ, ಒಂದು ಮಧುಪಾನ ಗೃಹವನ್ನು ಹೊಕ್ಕರು. ದೊರೆ ತನ್ನ ಅರಮನೆಗೆ ಹಿಂತಿರುಗಿದ.

ತನ್ನ ದೈನಂದಿನ ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ, ನಗರಭಟರ ಮುಖ್ಯಾಧಿಕಾರಿಯನ್ನು ಕರೆಸಿ, ''ಇದೇನು? ನೀನು ಹೀಗೆಯೋ ನಮ್ಮ ಪ್ರಜೆಗಳ ಕ್ಷೇಮವನ್ನು ಕಾಪಾಡುವುದು? ಇಲ್ಲಿ ನಡೆಯುವುದು ನಿನಗೆ ತಿಳಿಯುತ್ತಲೇ ಇಲ್ಲವೋ? ಹೊರಡು. ವಿಚಿಂಡಿಲನ ಮಧುಪಾನ ಗೃಹದಲ್ಲಿ ನಾಲ್ಕು ಜನ ಚೋರರು ಕುಳಿತಿದ್ದಾರೆ. ಅವರನ್ನು ಬೇಡಿ ಹಾಕಿ ಎಳೆದು ತಾ,'' ಎಂದ.

ಆ ಅಧಿಕಾರಿ ಕಳ್ಳರುಗಳನ್ನು ಎಳೆತಂದು ದೊರೆಯ ಮುಂದೆ ನಿಲ್ಲಿಸಿದರು. ಆಗ, ''ಚೋರ ಮಿತ್ರರೇ, ನನ್ನ ಗುರುತು ನಿಮಗಿದೆಯೇ?'' ಎಂದ. ಸರೀಸೃಪ, ''ಪ್ರಭೂ, ನಾನು ನಿಮ್ಮನ್ನು ಖಂಡಿತವಾಗಿ ಆಗಲೇ ಗುರುತಿಸಿದೆ. ನರಿಯೂ ಅದನ್ನೇ ಹೇಳಿತು. ಆದರೆ ಈ ಅವಿವೇಕಿಗಳು ಕೇಳಲಿಲ್ಲ. ನನ್ನನ್ನೂ ತಪ್ಪು ದಾರಿಯಲ್ಲಿ ನಡೆಸಿಬಿಟ್ಟರು. ಕವಿಯ ವಾಣಿಯಂತೆ:

''ವಿವೇಕಿ ತಾನೊಬ್ಬನೇ ಇದ್ದಾಗ ತನ್ನ ಕಾರ್ಯವನ್ನು ಚೊಕ್ಕವಾಗಿ ಮಾಡಿ, ಸಂತೋಷಿಯಾಗಿರುತ್ತಾನೆ. ಅನೇಕರ ಮಾತಿಗೆ ಅವನು ಕಿವಿಗೊಟ್ಟಾಗ ತನ್ನ

ಬುದ್ಧಿಯ ಸಮತೋಲನವನ್ನು ಕಳೆದುಕೊಳ್ಳುತ್ತಾನೆ. ಅವನೆಷ್ಟೇ ಧೀರನಾದರೂ ವಿವೇಕಿಯಾದರೂ ಇವರ ಮಾತಿನ ಕೆಸರಿನಲ್ಲಿ ಸಿಕ್ಕು ಹೂತು ಹೋಗುತ್ತಾನೆ," ಎಂದ.

"ಚೋರರೇ, ನಿಮ್ಮ ಬುದ್ಧಿಯೇ ಇಷ್ಟು! ಉಳಿದವರ ಮಾತಿನಿಂದ ದಾರಿ ತಪ್ಪಿ ನಡೆಯುವ ಬಗ್ಗೆ ನೀವು ಇಷ್ಟೊಂದು ಯೋಚಿಸುತ್ತೀರಿ. ಆದರೆ ನಿಮ್ಮ ಅವಿವೇಕವೇ ನಿಮ್ಮನ್ನು ಎಂಥ ತಪ್ಪುದಾರಿಯಲ್ಲಿ ನಡೆಸುತ್ತಿದೆ ಎನ್ನುವುದನ್ನು ಕುರಿತು ನೀವು ಚಿಂತೆ ಮಾಡುವುದಿಲ್ಲ."

"ನಮ್ಮಿಂದಲೇ ನಾವು ಹೇಗೆ ದಾರಿ ತಪ್ಪಿದೆವು?"

"ಅದು ತುಂಬ ಸ್ಪಷ್ಟವಾಗಿದೆ. ಧೀರರಂತೆ ಬದುಕಬಹುದಾದ ನೀವು ಈಗ ಚೋರವೃತ್ತಿಗೆ ಇಳಿದಿದ್ದೀರಿ: ಯಾಕೆಂದರೆ ಮನುಷ್ಯರು ಈ ಪ್ರಪಂಚದಲ್ಲಿ ತಮ್ಮ ಶೌರ್ಯದಿಂದ ಕೀರ್ತಿಯನ್ನೂ ಧನವನ್ನೂ ಗಳಿಸಿ ಗೌರವಕ್ಕೆ ಪಾತ್ರರಾಗುತ್ತಾರೆ. ನಿಮ್ಮಲ್ಲಿ ಶೌರ್ಯವಿದ್ದರೂ ನೀವು ಅಪಕೀರ್ತಿಯ ಹಾದಿ ಹಿಡಿದಿದ್ದೀರಿ. ಮನಸ್ಸಿನ ಕೆಟ್ಟತನವನ್ನು ಕಳೆದುಕೊಳ್ಳುವುದು ನಿಜವಾಗಿಯೂ ಕಷ್ಟದ ಕೆಲಸ."

"ಪ್ರಭೂ, ನಮ್ಮ ಕೆಟ್ಟತನಕ್ಕೆ ಒಂದು ಕಾರಣವಿದೆ."

"ನಿಮ್ಮಲ್ಲಿ ಕೆಟ್ಟತನವಿದೆ ಎಂದು ತಿಳಿದಿದ್ದೂ ಅದರಿಂದ ಏಕೆ ನೀವು ಬಿಡುಗಡೆಯನ್ನು ಬಯಸುವುದಿಲ್ಲ?"

"ನಮ್ಮ ಬಡತನವೇ ಅದಕ್ಕೆ ಅಡ್ಡಿಯಾಗಿ ನಿಂತಿರುವುದು. ನಮ್ಮ ದಾರಿದ್ರ್ಯವೇ ನಮ್ಮನ್ನು ಈ ಕೆಟ್ಟತನಕ್ಕೆ ದಾಸರನ್ನಾಗಿಸಿರುವುದು. ಏಕೆಂದರೆ,

"ದಾರಿದ್ರ್ಯದಿಂದಲೇ ಎಲ್ಲ ಕೆಡುಕೂ ಸಂಭವಿಸುತ್ತದೆ. ಅದು ಜನರನ್ನು ಪಾಪಕ್ಕೆ ನೂಕುತ್ತದೆ; ಕಳ್ಳತನ ಮಾಡುವಂತೆ ಪ್ರೇರೇಪಿಸುತ್ತದೆ; ವಂಚನೆಯನ್ನು ಕಲಿಸುತ್ತದೆ, ಶಕ್ತಿಹೀನನಾದವನನ್ನು ಭಿಕ್ಷೆ ಬೇಡುವಂತೆ ಮಾಡುತ್ತದೆ."

"ಚೋರರೇ, ಕೇಳಿ. ನೀವು ಯಾವಾಗ ನನ್ನ ಮಿತ್ರರಾದಿರೋ ಆಗಲೇ ನಿಮ್ಮ ದಾರಿದ್ರ್ಯವೂ ಹೊರಟು ಹೋಯಿತು. ಯಾಕೆಂದರೆ ಸ್ನೇಹ ಯಾವಾಗಲೂ ಸಮಾನಸ್ಕಂಧರಲ್ಲಿ ಇರುವಂಥದು. ನಿಮ್ಮ ಜೊತೆ ನಾನು ಸ್ನೇಹ ಬೆಳೆಸಿದ ಗಳಿಗೆಯಲ್ಲೇ ನಾನು ಕ್ಷಣ ಕಾಲ ಚೌರ್ಯವನ್ನೇ ಆಶ್ರಯಿಸಿ ದಂತಾಯಿತು. ಆದ್ದರಿಂದ ಈಗ ನಾನು ಸ್ನೇಹಿತನಂತೆ ನನ್ನ ರಾಜತ್ವವನ್ನೂ ನಿಮ್ಮೊಡನೆ ಹಂಚಿಕೊಳ್ಳಬೇಕು. ಇನ್ನು ಮುಂದೆ ನೀವು ನಿಮ್ಮ ಕೇಡಿಗ ಬುದ್ಧಿಯನ್ನು ಬಿಟ್ಟು ಬಿಡಬೇಕು."

"ಖಂಡಿತವಾಗಿ ಬಿಡುತ್ತೇವೆ. ಬಿಟ್ಟೆವು."

"ಒಳ್ಳೆಯದು. ಆದರೆ ನೀವು ಮತ್ತೆ ಇದೇ ವೃತ್ತಿಗೆ ಇಳಿದರೆ ಈಗಿರುವ ಸ್ಥಿತಿಯಲ್ಲೇ ಇರುತ್ತೀರಿ."

ಆ ನಂತರ ದೊರೆ ಪುರಪತಿಗೆ ಅವನ ವಸ್ತುಗಳನ್ನು ಹಿಂತಿರುಗಿಸಿ, ಕಳ್ಳರಿಗೆ ಧನಕನಕಗಳನ್ನಿತ್ತು ಅವರ ದಾರಿದ್ರ್ಯವನ್ನು ನಿವಾರಿಸಿ, ಸರೀಸೃಪನನ್ನು ಶಾಲ್ಮಲೀ ಪುರದ ಮಂಡಲಾಧಿಕಾರಿಯಾಗಿ ನೇಮಿಸಿದ.

ಸ್ವಲ್ಪ ಕಾಲಾನಂತರ ಚೋರನಾಗಿದ್ದ ಈ ಸರೀಸೃಪ ಹೇಗೆ ನಡೆದುಕೊಳ್ಳು ತ್ತಿದ್ದಾನೆ ಎಂದು ತಿಳಿದುಕೊಳ್ಳುವ ಕುತೂಹಲದಿಂದ, ಸುಚೇತನ ಎನ್ನುವ ಗೂಢಚಾರನನ್ನು ಶಾಲ್ಮಲೀಪುರಕ್ಕೆ ಕಳುಹಿಸಿ, ಅಲ್ಲಿನ ಎಲ್ಲ ವಿದ್ಯಮಾನಗಳ ಬಗ್ಗೆ ವಿವರವನ್ನು ತರಿಸಿಕೊಂಡ. ನಂತರ, ಸುಚೇತನನನ್ನು ಕೇಳಿದ. ಆಗ ಸುಚೇತನ

"ಪ್ರಭೂ, ನಿಮಗೆ ಇಷ್ಟವಾಗುತ್ತದೋ ಇಲ್ಲವೋ ಕಾಣೆ; ಆದರೆ ಸರಳ ಸತ್ಯವನ್ನು ಸರಳವಾಗಿ ತಿಳಿಸುವುದು ನನ್ನ ಕರ್ತವ್ಯ. ಆದ್ದರಿಂದ ಹೇಳುತ್ತೇನೆ, ಕೇಳಿ:

"ಯಾರೋ ಒಬ್ಬನ ಮೇಲಿನ ಕರುಣೆಯಿಂದಾಗಿ ನೀವು ಚೋರ ಹೃದಯಿಗೆ ರಾಜ್ಯಾಧಿಕಾರ ಕೊಟ್ಟು ಹಲವರಿಗೆ ಗಂಡಾಂತರ ತಂದಿಟ್ಟಿರಿ. ಮೊದಲೇ ಸರೀಸೃಪ ಕೆಟ್ಟ ಸ್ವಭಾವದವನು. ಈಗವನಿಗೆ ಅಧಿಕಾರವೂ ಇದೆ. ಕೇಡಿಗನ ಕೈಗೆ ಅಧಿಕಾರವೂ ದೊರೆತರೆ ಅವನು ಮಾಡದಿರುವ ದುಷ್ಟಕಾರ್ಯ ಯಾವುದು? ನೀವು ಅವನ ದಾರಿದ್ರ್ಯವನ್ನು ನಿವಾರಿಸಿದಿರಿ; ಆದರೆ ಅವನ ಸ್ವಭಾವವನ್ನು ಬದಲಿಸಲಿಲ್ಲ. ಅವನೀಗ ಪರರ ಸ್ವತ್ತನ್ನು ಅಪಹರಿಸುತ್ತಿದ್ದಾನೆ; ಪರರ ಪತ್ನಿಯರನ್ನು ಜಾರಿಣಿಯರನ್ನಾಗಿ ಮಾಡುತ್ತಿದ್ದಾನೆ. ತಾನು ಸುರಕ್ಷಿತ ವಾಗಿದ್ದೇನೆ ಎನ್ನುವುದು ಈ ಎಲ್ಲವನ್ನೂ ಅವನು ನಿರ್ಭಯದಿಂದ ಮಾಡಲು ಪ್ರಚೋದಿಸುತ್ತಿವೆ.

ಈಗವನು ಹೀಗೆ ಹೇಳುತ್ತಿದ್ದಾನೆ:

"ನನಗೆ ಈ ಅಧಿಕಾರ ದೊರೆತದ್ದೇ ನನ್ನ ಚೋರ ವೃತ್ತಿಯಿಂದ. ನನ್ನ ಚೋರ ಸ್ವಭಾವವೇ ನನಗೆ ಈ ಸುಖ ತಂದಿರುವುದು. ನಾನು ಅದನ್ನು ಏಕೆ ಬಿಡಲಿ?"

ದುಷ್ಟ ಮಾರ್ಗದಿಂದಲೇ ಅಧಿಕಾರ, ಸಂಪತ್ತು, ಸುಖ ದೊರೆಯ ಬಹುದಾದರೆ, ಹಾಗೆ ಸಂಪಾದಿಸಿ ಅದನ್ನು ಅನುಭವಿಸುವವನು ಉಳಿದವರಿಗೆ

ಅನುಕರಣೀಯನಾಗುತ್ತಾನೆ. ಎಲ್ಲರೂ ಅವನಂತೆ ಆಗಲು ಆಶಿಸುತ್ತಾರೆ," ಎಂದ.

ದೊರೆ, "ನನ್ನ ಕಾರ್ಯದಿಂದ ಇದು ಘಟಿಸಿದೆ. ನನ್ನ ಹೆಸರಿಗೂ ಇದು ಕಳಂಕ ತಂದಿದೆ," ಎಂದ.

ಆಗ ಗೂಢಚಾರ, "ಚೋರನ ಅಪಯಶಸ್ಸು ಸಾಹಸಾಂಕನಿಗೆ ಬಂತು; ಸಾಹಸಾಂಕನ ಕೀರ್ತಿ ಚೋರನನ್ನು ಸೇರಿತು. ಕಾರಣ, ಅವರಿಬ್ಬರ ನಡುವೆ ಸ್ನೇಹ ಸೇತುವೆ ಏರ್ಪಟ್ಟಿತ್ತು."

"ಹಾಗಾದರೆ ನಾನೀಗ ಏನು ಮಾಡಬೇಕು?"

"ನಿಮಗೆ ಬಂದಿರುವ ಅಪಕೀರ್ತಿಯನ್ನು ನೀವು ನಿವಾರಿಸಿಕೊಳ್ಳಬೇಕು."

ವಿಕ್ರಮಾದಿತ್ಯ ಕೂಡಲೇ ಕಾರ್ಯೋನ್ಮುಖನಾಗಿ, ಶಾಲ್ಮಲೀಪುರಕ್ಕೆ ಹೋಗಿ, ಸುಚೇತನನ ವರದಿಯನ್ನು ಪ್ರತ್ಯಕ್ಷ ಪರೀಕ್ಷೆಗೆ ಒಳಪಡಿಸಿ, ಅದು ನಿಜವೆಂದು ಕಂಡಾಗ, ಸರೀಸೃಪನನ್ನು ಅಧಿಕಾರದಿಂದ ಇಳಿಸಿ, ಅವನ ವಧೆಗೆ ಅಪ್ಪಣೆ ಮಾಡಿದ.

# ನಾಲ್ವರು ಸೋಮಾರಿಗಳ ಕತೆ

ಕಾರ್ಯಶೀಲತೆಯು ಮೂಲ ಶಕ್ತಿ; ಈ ಶಕ್ತಿ ಎಲ್ಲ ಜೀವಿಗಳ ಒಂದು ಆವಶ್ಯಕ ಗುಣ; ಯಾರಲ್ಲಿ ಈ ಶಕ್ತಿ ಯಾವ ರೂಪದಲ್ಲೂ ಕಾಣಿಸುವುದಿಲ್ಲವೋ ಅವರೇ ಸೋಮಾರಿಗಳು:

ಮಿಥಿಲಾ ರಾಜ್ಯದಲ್ಲಿ ವೀರೇಶ್ವರ ಎನ್ನುವ ಅಮಾತ್ಯನೊಬ್ಬನಿದ್ದ. ಸ್ವಭಾವತಃ ಅವನು ಉದಾರಿ, ದಯಾಳು.

ಊರಿನ ನಿರ್ಗತಿಕರು ಹಾಗೂ ದುರದೃಷ್ಟವಶಾತ್ ದಾರಿದ್ರ್ಯದಲ್ಲಿ ಸಿಕ್ಕು ನರಳುತ್ತಿರುವ ಜನಕ್ಕೆ ಅನುಕೂಲವಾಗಲೆಂದು ಈತ ಉಚಿತ ಊಟದ ಏರ್ಪಾಡು ಮಾಡಿದ್ದ. ಇಲ್ಲಿ ಯಾವ ಕೆಲಸವನ್ನೂ ಮಾಡದ ಸೋಮಾರಿಗಳು ಬಂದು ಮುಕ್ತ ಭೋಜನದ ಲಾಭ ಪಡೆಯುತ್ತಿದ್ದರು. ಕ್ಷುದ್ಬಾಧೆಯ ಕಿಚ್ಚು ಇವರನ್ನು ತಿವಿದು ಎಬ್ಬಿಸಿದರೂ ಇವರು ಯಾವ ಕೆಲಸವನ್ನೂ ಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ಈ ಜನ ಯಾವಾಗಲೂ ಒಂದು ವಿಧವಾದ ಪರಮ ಸುಖಸ್ಥಿತಿಯಲ್ಲಿ ಇರುತ್ತಿದ್ದರು. ಅವರು ಮನಸ್ಸಿಗಾಗಲೀ ಕೈಕಾಲು ಗಳಿಗಾಗಲಿ ಯಾವ ಶ್ರಮವನ್ನೂ ನೀಡುತ್ತಿರಲಿಲ್ಲ. ಅವರ ನಿದ್ದೆ ಕೆಡುತ್ತಿದ್ದುದು ಅವರ ಹಸಿದ ಹೊಟ್ಟೆ ತುಂಬ ಬಾಧಿಸಿದಾಗ ಮಾತ್ರ.

ಯಾವಾಗ ಈ ದಯಾಳುವಾದ ಅಮಾತ್ಯ ಮುಕ್ತ ಭೋಜನದ ವ್ಯವಸ್ಥೆ ಮಾಡಿದನೋ ಅಂದಿನಿಂದ ಅವರು ನಿರಾಳವಾಗಿ ಬಂದು ಅಲ್ಲಿಯೇ ಉಂಡು ಅಲ್ಲಿಯೇ ಮಲಗತೊಡಗಿದರು. ಇವರನ್ನು, ಇವರ ಸುಖ ಜೀವನವನ್ನೂ ಕಂಡ ಸನ್ಯಾಸಿಗಳ ವೇಷ ತೊಟ್ಟವರು, ವಂಚಕರು, ರಕ್ಕರು ಇಲ್ಲಿಯೇ ಬಂದು ಉಣ್ಣುವ ಪರಿಪಾಠ ಮಾಡಿಕೊಂಡರು.

ಇಷ್ಟೊಂದು ಜನರ ಊಟದ ವೆಚ್ಚವನ್ನು ಭರಿಸುವುದು ಅಧಿಕಾರಿಗಳಿಗೆ ಕಷ್ಟವಾಯಿತು. ಅವರೆಲ್ಲ ಒಂದೆಡೆ ಕಲೆತು ಯೋಚಿಸಿದರು: 'ನಮ್ಮ ಅಮಾತ್ಯ ನಿರ್ಗತಿಕರ ಬಗ್ಗೆ ಕರುಣೆಯಿಂದ ಈ ವ್ಯವಸ್ಥೆ ಮಾಡಿದ್ದಾನೆ. ಆದರೆ ಅದರ ಪ್ರಯೋಜನ ಈಗ ಯೋಗ್ಯರಲ್ಲದವರಿಗೇ ಸಲ್ಲುತ್ತಿದೆ. ಇದನ್ನು ಹೇಗಾದರೂ

ತಪ್ಪಿಸುವುದು ನಮ್ಮ ಕರ್ತವ್ಯ. ಆದ್ದರಿಂದ ಮೊದಲು ನಿಜವಾದ ಸೋಮಾರಿಗಳು ಯಾರೆಂದು ಪತ್ತೆ ಮಾಡೋಣ'.

ಹೀಗೆ ಯೋಚಿಸಿ ಒಂದು ರಾತ್ರಿ ಎಲ್ಲ ನಿದ್ದೆಹೋದ ಹೊತ್ತಿನಲ್ಲಿ ಅವರುಗಳು ಉಳಿಯಲು ವ್ಯವಸ್ಥೆ ಮಾಡಿದ ಮನೆಗೆ ಬೆಂಕಿ ಹಾಕಿಸಿ, ಇದರ ಪರಿಣಾಮ ಏನಾಗುತ್ತದೆಂದು ನೋಡಲು ಅನತಿ ದೂರದಲ್ಲಿಯೇ ನಿಂತರು.

ಬೆಂಕಿ ಬಿದ್ದ ಕೂಡಲೇ ಅಲ್ಲಿ ಸೇರಿಕೊಂಡಿದ್ದ ವಂಚಕರು, ಠಕ್ಕರು, ಸೋಗಿನ ಸನ್ಯಾಸಿಗಳು ಎದ್ದು ಒಂದೇ ಉಸಿರಿಗೆ ಹೊರಗೆ ಓಡಿಬಂದರು. ಸ್ವಲ್ಪ ಹೊತ್ತಿನ ನಂತರ ಸ್ವಲ್ಪ ಸೋಮಾರಿಗಳಾಗಿದ್ದವರು ಎದ್ದು ಆಚೆ ಬಂದರು ಆದರೆ ನಿಜವಾಗಿ ಸೋಮಾರಿಗಳಾಗಿದ್ದ ನಾಲ್ವರು ಮಾತ್ರ ಅಲ್ಲೇ ಉಳಿದರು. ಅಷ್ಟೇ ಅಲ್ಲ. ಮಲಗಿದ್ದೆಡೆಯೇ ಮಾತಾಡಲು ಪ್ರಾರಂಭಿಸಿದರು.

ಮುಖದ ತುಂಬ ಹೊದಿಕೆ ಹೊದ್ದು ಮಲಗಿದ್ದ ಒಬ್ಬ, "ಅಯ್ಯೋ, ಇದೇನಿದು ನಿದ್ದೆಯ ಹೊತ್ತಿನಲ್ಲಿ ಗಲಾಟೆ," ಎಂದ ಇನ್ನೊಬ್ಬ, "ಅದೇನೋ ಮನೆಗೆ ಬೆಂಕಿ ಬಿದ್ದಿದೆಯಂತೆ," ಎಂದ ಮೂರನೆಯವನು, "ನಮ್ಮ ಮೇಲೆ ಒದ್ದೆ ಗೋಣಿಚೀಲವನ್ನೋ, ಚಾಪೆಯನ್ನೋ ಹೊದಿಸುವವರು ಇಲ್ಲಿ ಯಾರೂ ಇಲ್ಲವೇ?" ಎಂದು ಕೇಳಿದ. ನಾಲ್ಕನೆಯವನು, "ಏನು ಹರಟುತ್ತೀರಯ್ಯಾ! ಸುಮ್ಮನೆ ಬಾಯಿಮುಚ್ಚಿ ಮಲಗಿಕೊಳ್ಳಲು ನಿಮಗೆ ಕಷ್ಟವೇ?" ಎಂದು ಗದರಿದ

ಆಚೆ ನಿಂತಿದ್ದ ಅಧಿಕಾರಿಗಳು ಬೆಂಕಿ ಹೆಚ್ಚಾಗುತ್ತಿದ್ದುದನ್ನು ಗಮನಿಸಿ, ಒಳಕ್ಕೆ ನುಗ್ಗಿ ಈ ನಾಲ್ವರನ್ನೂ ಹೊರಕ್ಕೆ ಎಳೆದು ಹಾಕಿದರು.

ನಂತರ ಒಬ್ಬ ಅಧಿಕಾರಿ ಹೀಗೆ ಹೇಳಿದ:

"ಪತ್ನಿಯರಿಗೆ ಇರುವ ಒಂದು ಆಸರೆ ಗಂಡಂದಿರು; ಮಕ್ಕಳಿಗೆ ತಾಯಿ; ಇಂಥ ಸೋಮಾರಿಗಳಿಗೋ ಯಾವನೋ ದಯಾರ್ದ್ರ ಮನುಷ್ಯನಷ್ಟೆ".

ಈ ಪ್ರಯೋಗದ ನಂತರ ಅಮಾತ್ಯ ವೀರೇಶ್ವರ ಇವರ ಖರ್ಚಿಗೆಂದು ಇನ್ನಷ್ಟು ಹಣ ಕೊಟ್ಟ.

ಉದಾತ್ತ ನಾಯಕರ ಧೀರೋದಾತ್ತ ಗುಣಗಳ ವರ್ಣನೆಯನ್ನು ಕೇಳಿದ ನಂತರ, ರಾಜಾ ಪಾರಾವಾರ, "ಮುನಿವರ್ಯ, ನಾನೀಗ ಬುದ್ಧಿವಂತರ ಬಗ್ಗೆ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಯಾರು ಬುದ್ಧಿವಂತರು? ಅವರನ್ನು ಗುರುತಿಸುವುದು ಹೇಗೆ? ದಯವಿಟ್ಟು ತಿಳಿಸಿ" ಎಂದ. ಸುಬುದ್ಧಿ, "ದೊರೆಯೇ, ಯಾರು ಬುದ್ಧಿವಂತ ಎಂದರೆ ಸರಿಯಾದ ಸಮಯಕ್ಕೆ ಸರಿಯಾದ ಉಪಾಯ ವನ್ನು ಹುಡುಕುವವನು; ಯಾರಿಗೂ ದಾರಿ ತೋರದಿದ್ದಾಗ ದಾರಿಯನ್ನು ಕಾಣುವವನು, ಇಂಥವನನ್ನು ಬುದ್ಧಿವಂತ ಎಂದು ತಿಳಿಯಬೇಕು. ಇಂಥವರ ಕತೆಯನ್ನು ಕೇಳಿದ ಕೋಡಂಗಿಯೂ ಬುದ್ಧಿಶಕ್ತಿಯನ್ನು ಗಳಿಸಿಕೊಳ್ಳುತ್ತಾನೆ. ಯಾರ ಬುದ್ಧಿಶಕ್ತಿ ಸಾಮಾನ್ಯವಾಗಿ ಅಳತೆಗೆ ಸಿಗುವುದಿಲ್ಲವೋ ಅಂಥವರ ಬಗ್ಗೆ ಈಗ ಹೇಳುತ್ತೇನೆ. ಕೇಳು," ಎಂದ.

# ಚತುರಮತಿಯ ಕತೆ

ಪ್ರಸಂಗಗಳು ಎದುರಾದಾಗ ಚುರುಕಾಗಿ ಯೋಚಿಸಿ, ಸೂಕ್ತ ತೀರ್ಮಾನವನ್ನು ಯಾರು ತೆಗೆದುಕೊಳ್ಳುತ್ತಾನೆಯೋ ಅವನೇ ಚತುರಮತಿ:

ಬಹಳ ಹಿಂದೆ ಪೃಥು ಎನ್ನುವ ಒಬ್ಬ ದೊರೆ ಇದ್ದ. ಒಂದು ಸಾರಿ ದೊರೆ ತನ್ನ ಪತ್ನಿ ಸುಲೋಚನೆಯ ಜೊತೆ ಮೃಗಯಾವಿಹಾರಕ್ಕೆಂದು ಹೊರಟ ಅವರ ಸಂಗಡ ಒಂದು ದೊಡ್ಡ ಪರಿವಾರವೇ ಹೊರಟರೂ ಮೃಗಗಳ ಬೇಟೆಯಲ್ಲಿ ಆಸಕ್ತರಾದ ಈ ಜನ ಕಾಡಿನಲ್ಲಿ ಯಾವು ಯಾವುದೋ ದಿಕ್ಕುಗಳಲ್ಲಿ ಹೊರಟುಹೋದರು.

ದೊರೆ ಕಾಡಿನ ಮಧ್ಯದಲ್ಲಿ ಹೋಗುತ್ತಿರುವಾಗ, ದಿವ್ಯವಾದ ವಸ್ತ್ರಾಭರಣ ತೊಟ್ಟು ಅದೇ ತಾನೆ ಹುಟ್ಟಿದ್ದ ಮಗುವೊಂದು ಮರ ಒಂದರ ಕೆಳಗೆ ಅಳುತ್ತ ಮಲಗಿರುವುದು ರಾಣಿಯ ಕಣ್ಣಿಗೆ ಬಿತ್ತು ರಾಜನೂ ಅದನ್ನು ನೋಡಿದ: "ಪ್ರಿಯೇ, ಏನಾಶ್ಚರ್ಯ! ಈ ಕಾಡಿನ ನಡುವೆ ಮಗು ಮಲಗಿದೆಯಲ್ಲಾ? ಯಾವ ಮೃಗದಿಂದಲೂ ಅದಕ್ಕೆ ಅಪಾಯ ಸಂಭವಿಸಿಲ್ಲ ಎಂಥ ಸೋಜಿಗ ಇದು, ಅಲ್ಲವೇ?" "ಪ್ರಭೂ, ಅಷ್ಟೇ ಅಲ್ಲ. ಮಗುವನ್ನು ನೋಡಿ: ಒಳ್ಳೆಯ ಹುಣ್ಣಿಮೆಯ ಚಂದ್ರನ ಹಾಗೆ ಹೊಳೆಯುತ್ತಿದೆ ಈ ಮಗುವನ್ನು ನೋಡಿ ನನ್ನ ಮನಸ್ಸು ಕರಗಿ ಹೋಗುತ್ತಿದೆ. ನೀವು ಒಪ್ಪಿದರೆ ನಾನು ಈ ಮಗುವನ್ನು ಒಯ್ದು ತಾಯ ಪ್ರೀತಿಯಿಂದ ಸಾಕುತ್ತೇನೆ"

"ಛೀ, ಬುದ್ಧಿಗೆಟ್ಟವಳೇ! ನಿನಗೆ ನಿಜವಾಗಿ ಜುಗುಪ್ಸೆ ಉಂಟಾಗಬೇಕು. ಯಾವ ಕುಲದಲ್ಲಿ ಯಾರಿಗೆ ಜನಿಸಿದ್ದೋ ಅಂಥ ಮಗುವನ್ನು ಸಾಕುತ್ತೇನೆ ಎನ್ನುತ್ತೀಯಲ್ಲಾ?"

"ಸ್ವಾಮಿ, ವಿನಾಕಾರಣ ನಾವು ಒಬ್ಬರನ್ನು ದೂಷಿಸಬಾರದು. ಅವರ ಸ್ಥಿತಿಯನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕು. ಮತ್ತೆ, ಮಗನ ಗುಣದಿಂದ ತಾಯಿಯನ್ನು ಅಳೆಯಬೇಕೇ ವಿನಾ ಬೇರೆ ಕಾರಣಗಳಿಂದ ಅಲ್ಲ ಹೆತ್ತಾಕೆ ಯಾವ ಪರಿಸ್ಥಿತಿಯ ಒತ್ತಡದಿಂದ ಹೀಗೆ ಮಾಡಿದಳೋ ಯಾರಿಗೆ ಗೊತ್ತು. ಆದ್ದರಿಂದ ನನ್ನ ಕೋರಿಕೆಗೆ ನೀವು ಒಪ್ಪಬೇಕು".

ದೊರೆಗಳು ಸಾಮಾನ್ಯವಾಗಿ ಅವಿಧೇಯತೆಯನ್ನು ಸಹಿಸುವವರಲ್ಲ. ಈ ದೊರೆಯಾದರೂ ಅಷ್ಟೆ. ಅವನು ಹೇಳಿದಷ್ಟೂ ಈಕೆಯ ಮನಸ್ಸು ಹೆಚ್ಚು ಗಟ್ಟಿಯಾಗುತ್ತ ಹೋಯಿತು. ಕಡೆಗೆ ದೊರೆ ಕೋಪದಿಂದ ರಾಣಿಯನ್ನು ರಥದಿಂದ ಕೆಳಕ್ಕೆ ನೂಕಿ, "ದುಷ್ಟೆ, ನಾನು ನಿನ್ನನ್ನು ತಿರಸ್ಕರಿಸಿದ್ದೇನೆ. ನೀನಿನ್ನು ನನ್ನ ಪತ್ನಿಯಲ್ಲ" ಎಂದು, ಯಾರೂ ಆಕೆಗೆ ಆಶ್ರಯವನ್ನು ಕೊಡಬಾರದೆಂದೂ, ಕೊಟ್ಟವರ ತಲೆಯನ್ನು ತಾನು ತೆಗೆಯುವುದಾಗಿಯೂ ಹೇಳಿ, ಅಲ್ಲಿಂದ ಹೊರಟು ಹೋದ.

ಹೀಗೆ, ಕೋಪ ಎನ್ನುವುದು ಮನುಷ್ಯನ ಬುದ್ಧಿಶಕ್ತಿಯನ್ನು ಹಾಳುಮಾಡಿ ಬಿಡುತ್ತದೆ. ಅದಕ್ಕೆ ಮನಸ್ಸು ಕೊಟ್ಟವನು ಮನೆಯನ್ನೂ, ಗೆಳೆಯರನ್ನೂ ತನ್ನ ಸಕಲ ಸರ್ವಸ್ವವನ್ನೂ ಕಳೆದುಕೊಳ್ಳುತ್ತಾನೆ.

ಕಾಡಿನಲ್ಲಿ ತನ್ನನ್ನು ಬಿಟ್ಟು ಹೊರಟು ಹೋದ ದೊರೆಯನ್ನು ಕುರಿತು ರಾಣಿ, 'ನಿಜವಾಗಿ ಗಂಡಂದಿರನ್ನು ಪ್ರೀತಿಸುವ ಹೆಂಡತಿಯರಿಗೆ ಇಂಥ ಪ್ರಸಂಗಗಳೇ ಒದಗುತ್ತವೆ. ಇರಲಿ. ನಾನು ಏನು ಮಾಡಿದ್ದೇನೋ ಅದನ್ನು ಪೂರ್ಣಗೊಳಿಸಬೇಕು,' ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ಮಗುವನ್ನು ಎತ್ತಿ ಎದೆಗೆ ಅಪ್ಪಿಕೊಂಡಳು. ಅದರ ಜೊತೆಗೆ ಮಗು ಮಲಗಿದ್ದ ದಿವ್ಯ ವಸ್ತ್ರವನ್ನೂ ತೆಗೆದುಕೊಂಡು, ತನ್ನ ಗುರುತು ಇತರರಿಗೆ ತಿಳಿಯದಂತೆ ಅಲ್ಲೇ ಇದ್ದ ಬೂದಿಯಿಂದ ಮುಖವನ್ನೂ, ಬಟ್ಟೆಯನ್ನೂ ವಿಕೃತಗೊಳಿಸಿಕೊಂಡು ಆಶ್ರಯ ಹುಡುಕುತ್ತ ಹೊರಟಳು. ಸ್ವಲ್ಪ ಸಮಯದ ನಂತರ ದಾರಿಯಲ್ಲಿ ಆಕೆಗೆ ಬ್ರಾಹ್ಮಣನೊಬ್ಬ ಎದುರಾದ. ಆಕೆ ಅವನಲ್ಲಿ ಆಶ್ರಯ ಪಡೆದು ಮಗುವನ್ನು ಸಾಕಿ, ಸಲಹಿ ಬೆಳೆಸಿದಳು. ನಡೆಯಬೇಕಾದ ಎಲ್ಲ ಸಂಸ್ಕಾರಗಳನ್ನೂ ವಿಧಿವತ್ತಾಗಿ ನೆರವೇರಿಸಿ, ಮಗುವಿಗೆ ವಿಶಾಖ ಎನ್ನುವ ಹೆಸರನ್ನೂ ಕೊಟ್ಟಳು.

ತಾಯಿಯ ಆಸರೆಯಲ್ಲಿ ಬೆಳೆದ ಮಗು ದೊಡ್ಡವನಾಗಿ ಒಂದು ದಿನ ತನ್ನ ತಂದೆ ಯಾರು, ಅವನ ಹೆಸರೇನು ಎಂದು ಕೇಳಿದ. ಆಕೆ ತನಗೆ ತಿಳಿಯದು ಎಂದು ಹೇಳಿದಳು ಆಗ ಮಗ, "ಹಾಗಾದರೆ ನಾನು ವಿಶಾಖ ಹೇಗಾದೇನು? ನನ್ನ ತಂದೆ ಯಾರೆಂದು ಗೊತ್ತಿರದಿದ್ದರೆ ನನ್ನ ಹೆಸರು ತಾನೇ ಹೇಗೆ ನಿಜ? ನಾನು ವಿಪ್ರಕಾರ್ಯದಲ್ಲಿ ಯಾರಿಗೆಂದು ತರ್ಪಣ ಕೊಡುವುದು?" ಎಂದ. ರಾಣಿ ಆಗ ಅವನು ತನಗೆ ಹೇಗೆ ಸಿಕ್ಕಿದ ಎನ್ನುವುದನ್ನೆಲ್ಲ ವಿವರಿಸಿದಳು. ಮಗ ಅದನ್ನೆಲ್ಲ ಕೇಳಿ, "ಹಾಗಾದರೆ ನನ್ನಿಂದಾಗಿ ನಿನಗೆ ಈ ಗತಿ ಬಂದಿದೆ. ನಾನು ನಿನಗೆ ಸಲ್ಲಿಸಬೇಕಾದ ಋಣ ದೊಡ್ಡದು. ಆದರೂ ಕೃತಜ್ಞತೆಯಿಂದ ನಾನದನ್ನು ಸಲ್ಲಿಸುತ್ತೇನೆ. ಹೇಳು, ನೀನು ನನ್ನನ್ನು ಕಂಡದ್ದು ಎಲ್ಲಿ? ಏಕೆಂದರೆ,

ಯಾವುದಾದರೂ ವಿಷಯವನ್ನು ತಿಳಿದುಕೊಳ್ಳಬೇಕಾದರೆ ಯಾವುದು, ಎಲ್ಲಿ, ಯಾವ ಕಾಲದಲ್ಲಿ ಸಂಭವಿಸಿತು ಎನ್ನುವುದರ ತಿಳುವಳಿಕೆ ಅಗತ್ಯ. ಅರಿವಿನ ವಾದದ ಬುನಾದಿಯೇ ಅದು,'' ಎಂದ.

ರಾಣಿ ಕಾಡಿನಲ್ಲಿ ಆ ಸ್ಥಳವನ್ನು ಹುಡುಕಿಕೊಂಡು ಹೋಗುತ್ತಿದ್ದಾಗ ಸಾಧುವೊಬ್ಬ ದಾರಿಯಲ್ಲಿ ಸಿಕ್ಕ. ಅವನ ಹೆಸರು ತಪಶ್ಶೀಲ. ವಿಶಾಖ ಮುನಿಗೆ ನಮಸ್ಕರಿಸಿ ತಾನು ಬಂದ ಕಾರಣವನ್ನು ನಿವೇದಿಸಿದ. ಆಗ ಆತ, ``ಮಗೂ, ನೀನು ಮಲಗಿದ್ದ ಆ ವಸ್ತ್ರವನ್ನು ನನಗೆ ತೋರಿಸಿದರೆ, ನಿನ್ನ ಕುಲಗೋತ್ರದ ಬಗ್ಗೆ ಹೇಳಬಲ್ಲೆ'' ಎಂದ ವಿಶಾಖ ಅದನ್ನು ತಾಯಿಯಿಂದ ತೆಗೆದುಕೊಂಡು ಬಂದು ತೋರಿಸಿದ ತಪಶ್ಶೀಲ ತನ್ನ ಕುಟೀರದ ಒಳಕ್ಕೆ ಹೋಗಿ, ಅದರದೇ ಇನ್ನೊಂದು ಭಾಗವನ್ನು ತಂದ ಸೇರಿಸಿದಾಗ ಎರಡು ಚೂರುಗಳು ಒಂದಾಗಿ, ಏಕವಸ್ತ್ರವಾಗಿ ಕಾಣುತ್ತಿತ್ತು

ತಪಶ್ಶೀಲ ಸ್ವಲ್ಪ ನಾಚುತ್ತ, ``ಮಗೂ, ಕೇಳು, ನಾನಿಲ್ಲಿ ಎಷ್ಟೋ ವರ್ಷಗಳಿಂದ ತಪಸ್ಸಿನಲ್ಲಿದ್ದೇನೆ. ನನ್ನ ತಪಶ್ಶಕ್ತಿಗೆ ಹೆದರಿದ ಇಂದ್ರ ನನ್ನ ತಪಸ್ಸನ್ನು ಭಂಗ ಮಾಡಲು ತಿಲೋತ್ತಮೆ ಎನ್ನುವ ವಿದ್ಯಾಧರಿಯನ್ನು ಕಳುಹಿಸಿದ ಮನ್ಮಥ ನನ್ನ ಹೃದಯವನ್ನು ವಶಪಡಿಸಿಕೊಂಡು ಅದನ್ನು ಆಕೆಯ ಕೈಗೆ ಕೊಟ್ಟುಬಿಟ್ಟ. ಯಾರ ಬುದ್ಧಿ ಕಮಲಲೋಚನೆಯರ ಅಪಾಂಗ ದೃಷ್ಟಿಗೆ ಸಿಕ್ಕಿಹಾಕಿಕೊಳ್ಳುತ್ತದೋ ಅವರು ವಿವೇಕವನ್ನೂ, ನಾಚಿಕೆಯನ್ನೂ ಕಳೆದು ಕೊಳ್ಳುತ್ತಾರೆ ನನಗೆ ಆದದ್ದೂ ಅದೇ. ನಿನ್ನ ತಾಯಿ ತಿಲೋತ್ತಮೆ ತಾನು ಹೋಗುವಾಗ ತನ್ನ ವಸ್ತ್ರವನ್ನೇ ಎರಡಾಗಿ ಭಾಗಿಸಿ, ಒಂದರ ಮೇಲೆ ನಿನ್ನನ್ನು ಮಲಗಿಸಿ, ನಿನ್ನ ಗುರುತಿಗೆಂದು ಇನ್ನೊಂದು ಭಾಗವನ್ನು ನನ್ನ ಬಳಿ ಬಿಟ್ಟಳು''.

ತನ್ನ ಪೂರ್ವ ವೃತ್ತಾಂತ ತಿಳಿದು ವಿಶಾಖನಿಗೆ ತುಂಬ ಸಂತೋಷ ವಾಯಿತು ರಾಣಿ ಸುಲೋಚನೆಯ ಜೊತೆ ಅವನು ಪೃಥುವಿನ ರಾಜಧಾನಿಗೆ ಹೋಗಿ, ಆಕೆಯನ್ನು ಯೋಗ್ಯವಾದ ಒಂದು ಸ್ಥಳದಲ್ಲಿ ಇರಿಸಿ, ತಾನು ದೊರೆಯ ಮುಂದೆ ಸೇನಾರ್ಥಿಯಾಗಿ ನಿಂತ. ಅವನನ್ನು ನೋಡಿ ದೊರೆಗೂ ಮೆಚ್ಚುಗೆ ಯಾಯಿತು. ದೊರೆಯ ಸೇನೆಯಲ್ಲಿ ಅವನು ತೋರಿಸಿದ ಶ್ರದ್ಧೆ, ಜಾಣತನ ಗಳಿಂದಾಗಿ ವಿಶಾಖ ಬಲು ಬೇಗ ಅಧಿಕಾರದ ಮೆಟ್ಟಿಲುಗಳನ್ನು ಏರಿ, ಕಡೆಗೆ ಇಡೀ ರಾಜ್ಯದ ಸೇನಾಧಿಕಾರಿಯೂ ದೊರೆಯ ಪ್ರಮುಖ ಅಂಗರಕ್ಷಕನೂ ಆದ.

ಆಗ ಅವನು ರಾಣಿ ಸುಲೋಚನೆಯ ಬಳಿ ಬಂದು, ``ಅಮ್ಮಾ, ನಿನ್ನ ಮನೋರಥವನ್ನು ಪೂರೈಸಲು ನಾನು ಏನು ಮಾಡಬೇಕೆಂದು ಹೇಳು,'' ಎಂದ.

"ಮಗೂ, ನಿನಗೆ ಸಾಧ್ಯವಾದರೆ, ಪೃಥುವನ್ನು ಹಿಂಗಟ್ಟು ಮುಂಗಟ್ಟು ಕಟ್ಟಿ ಇಲ್ಲಿಗೆ ಎಳೆದುಕೊಂಡು ಬಾ" ಎಂದಳು.

ಮಾರನೆಯ ಬೆಳಗ್ಗೆಯೇ ವಿಶಾಖ ಕಾರ್ಯೋನ್ಮುಖನಾದ. ತನ್ನ ಜೊತೆ ಅವನು ಹಿರಿದ ಕತ್ತಿ ಹಿಡಿದಿದ್ದ ನಾಲ್ವರು ಯೋಧರನ್ನು ಕರೆದುಕೊಂಡು ರಾಜನ ಒಡ್ಡೋಲಗವನ್ನು ಪ್ರವೇಶಿಸಿದ. ಎಲ್ಲ ದಿಗ್ಭ್ರಾಂತರಾಗಿ ಎದ್ದು ನಿಂತಾಗ, ವಿಶಾಖ, ಅವರನ್ನು ಉದ್ದೇಶಿಸಿ ಹೀಗೆ ಹೇಳಿದ: "ಪ್ರಮುಖರೇ, ನಿಮಗೆ ಒಂದು ವಿಷಯ ಹೇಳಬಯಸುತ್ತೇನೆ. ನಿಮ್ಮಲ್ಲಿ ಕೇವಲ ಒಬ್ಬನನ್ನು ಬಿಟ್ಟು ಉಳಿದವರೆಲ್ಲ ನನ್ನ ಜೊತೆ ಸಂಧಿ ಮಾಡಿಕೊಂಡಿರುವವರೇ. ಆ ಒಬ್ಬನು ಯಾರು ಎಂದು ಅವನಿಗೊಬ್ಬನಿಗೇ ಗೊತ್ತು. ಅವನು ಏನಾದರೂ ಒಂದು ಹೆಜ್ಜೆ ಮುಂದಿಟ್ಟರೂ ನಾನವನ ತಲೆ ಉರುಳಿಸುವುದು ಖಂಡಿತ. ಆದ್ದರಿಂದ ಎಚ್ಚರ! ನಾನೀಗ ದೊರೆಯನ್ನು ಬಂಧಿಸಿ ಎಳೆದೊಯ್ಯುತ್ತೇನೆ."

ಪ್ರತಿ ಪ್ರಮುಖನೂ ತನ್ನೊಬ್ಬನನ್ನು ಬಿಟ್ಟು ಉಳಿದವರೆಲ್ಲ ಗೋಪ್ಯವಾಗಿ ವಿಶಾಖನೊಡನೆ ಸಂಧಿ ಬೆಳೆಸಿದ್ದಾರೆ ಎನ್ನುವ ನಂಬಿಕೆಯಲ್ಲಿ ಒಂದು ಹೆಜ್ಜೆಯನ್ನೂ ಮುಂದಿಡಲಿಲ್ಲ ಯಾರೂ ದೊರೆಯ ನೆರವಿಗೆ ಬರಲಿಲ್ಲ!

ವಿಶಾಖ ದೊರೆಯನ್ನು ಎಳೆತಂದು ಸುಲೋಚನೆಯ ಮುಂದೆ ನಿಲ್ಲಿಸಿದ. ಆಗ ಆಕೆ, "ಪ್ರಭೂ, ನನ್ನ ಗುರುತಿದೆಯೇ ನಿಮಗೆ?" ಎಂದು ಕೇಳಿದಳು. "ಇದೆ. ನೀನು ನನ್ನ ರಾಣಿ". "ಈ ವಿಶಾಖನ ಗುರುತು ಇದೆಯೇ?" "ಇಲ್ಲ." "ಆ ಮಗುವೇ ಈ ವಿಶಾಖ. ಪರಿಸ್ಥಿತಿಯನ್ನಲ್ಲದೆ ಮನುಷ್ಯನನ್ನು ದೂಷಿಸಬಾರದು, ಎಂದು ನಾನು ಆಗ ಹೇಳಿದ್ದೆ. ನೆನಪಿದೆಯೇ? ಅದೇ ಮಗು ಈಗ ಬೆಳೆದು ದೊಡ್ಡವನಾಗಿದ್ದಾನೆ," ಎಂದಳು.

ನಂತರ ರಾಣಿ ದೊರೆಗೆ ಮತ್ತೆ ಸಿಂಹಾಸನವನ್ನು ಕೊಡಿಸಿದಳು. ದೊರೆ ವಿಶಾಖನನ್ನು ತನ್ನ ಮಗನೆಂದೇ ಪರಿಗ್ರಹಿಸಿ ಅವನಿಗೆ ಯುವರಾಜ ಪಟ್ಟವನ್ನು ನೀಡಿದ.

ಹೀಗೆ ವಿಶಾಖ, ಸೈನ್ಯ, ಧನ, ಬಂಧು ಬಳಗ ಯಾರ ನೆರವು ಇಲ್ಲದಿದ್ದರೂ ತನ್ನ ಚತುರಮತಿಯ ಶಕ್ತಿಯಿಂದ ಯುವರಾಜನಾದ; ತನ್ನ ತಾಯಿಯ ಅಭೀಷ್ಟವನ್ನು ನೆರವೇರಿಸಿದ; ತನ್ನ ಪೂರ್ವವೃತ್ತಾಂತವನ್ನು ತಿಳಿದುಕೊಂಡು ಜಗದ್ವಿಖ್ಯಾತನಾದ.

"ಮುದ್ರಾರಾಕ್ಷಸ" ನಾಟಕವನ್ನು ಬರೆದವನು ಈ ವಿಶಾಖನೇ ಎನ್ನುವುದು ಜನಪ್ರತೀತಿ.

# ಸ್ಮೃತಿ ಕೌಶಲನ ಕತೆ

ಯಾರು ಒಂದು ಬಾರಿ ಕೇಳಿದ್ದನ್ನು ಸ್ವಲ್ಪವೂ ತಪ್ಪಿಲ್ಲದಂತೆ ತಮ್ಮ ನೆನಪಿನಲ್ಲಿ ಉಳಿಸಿಕೊಳ್ಳಬಲ್ಲರೋ ಅವರು ಸ್ಮೃತಿ ಕೌಶಲರು:

ಹಿಂದೆ ಬಂಗಾಳದಲ್ಲಿ ಶ್ರೀಹರ್ಷ ಎಂಬ ಖ್ಯಾತ ಕವಿ ಒಬ್ಬನಿದ್ದ ಅವನು "ನೈಷಧ ಚರಿತ" ಎಂಬ ಮಹಾಕಾವ್ಯವನ್ನು ಬರೆದ ಮೇಲೆ ಹೀಗೆ ತನ್ನೊಳಗೆ ಯೋಚಿಸಿದ: 'ಯಾವ ಕಾವ್ಯ ಭಾವಗರ್ಭಿತವಾಗಿ, ಓದುಗರ ಮನಸ್ಸನ್ನು ತನ್ನ ಲಾವಣ್ಯದಿಂದ ಸೆರೆಹಿಡಿಯಬಲ್ಲುದೋ ಅದು ಕವಿಯ ಕೀರ್ತಿಗೆ ಕಾರಣ ವಾಗುತ್ತದೆ; ಹಾಗಿಲ್ಲದಿದ್ದಲ್ಲಿ ಅದು ಕುಹಕಕ್ಕೆ ಗುರಿಯಾಗುತ್ತದೆ'. ಮತ್ತೆ, 'ಬಂಗಾರವನ್ನು ಬೆಂಕಿಯಲ್ಲಿ ಶುದ್ಧಗೊಳಿಸುವ ಹಾಗೆ, ಮಹಾಕಾವ್ಯವೂ ಕಾವ್ಯದ ಕಲೆಯನ್ನು ತಿಳಿದ ಜನರ ಬುದ್ಧಿಯ ಬೆಂಕಿಯಲ್ಲಿ ಪರೀಕ್ಷೆಗೆ ಒಳಗಾಗಬೇಕು. ಬಲ್ಲವರು ಒಪ್ಪದ ಮಹಾಕಾವ್ಯದಿಂದ ಯಾವ ಕವಿಗೆ ಏನು ಪ್ರಯೋಜನ?'

ಹೀಗೆ ಯೋಚನೆ ಮಾಡಿ ಶ್ರೀಹರ್ಷ ತನ್ನ ಮಹಾಕಾವ್ಯದೊಂದಿಗೆ ಕಾಶಿಗೆ ಹೋದ ಅಲ್ಲಿನ ಮೇಧಾವಿಗಳ ಮುಂದೆ ಅದನ್ನು ಓದುವುದು ಅವನ ಉದ್ದಿಶ್ಯ. ಕಾಶಿಯಲ್ಲಿ ಆಗ ಕೋಕ ಎಂಬ ಮಹಾ ಮೇಧಾವಿ ಒಬ್ಬನಿದ್ದ. ಆದರೀಗ ಆತ ಮನಸ್ಸನ್ನು ಸಂಪೂರ್ಣವಾಗಿ ಐಹಿಕ ಆಸಕ್ತಿಗಳಿಂದ ಆಚೆ ಇರಿಸಿ ಸದಾಕಾಲವೂ ಪರಮಾತ್ಮನ ಧ್ಯಾನದಲ್ಲೇ ತೊಡಗಿಸಿದ್ದ. ಪ್ರತಿದಿನವೂ ಮಧ್ಯಾಹ್ನ ಆತ ಮಣಿಕರ್ಣಿಕಾ ಘಟ್ಟಕ್ಕೆ ಹೋಗಿ ಅಲ್ಲಿ ಸ್ನಾನಾನಂತರ ಧ್ಯಾನಾಸಕ್ತನಾಗಿ

ಶ್ರೀಹರ್ಷ ಅವನು ಹೊರಡುವುದನ್ನೇ ಕಾದಿದ್ದು, ಅವನ ಹಿಂದೆಯೇ ಹೋಗುತ್ತ ತನ್ನ ಕಾವ್ಯವನ್ನು ವಾಚಿಸುತ್ತಿದ್ದ. ಇದು ಎಷ್ಟೋ ದಿನಗಳ ವರೆಗೆ ನಡೆಯಿತು. ಆದರೆ ಕೋಕ ಮಾತ್ರ ಒಂದು ದಿನವೂ ಒಂದು ಮಾತನ್ನೂ ಆಡಲಿಲ್ಲ. ಶ್ರೀಹರ್ಷನ ಕಾವ್ಯವನ್ನು ಮೆಚ್ಚಲೂ ಇಲ್ಲ, ತೆಗಳಲೂ ಇಲ್ಲ.

ಒಂದು ದಿನ ತನ್ನ ಕಾತರವನ್ನು ತಡೆಯಲಾಗದೆ ಶ್ರೀಹರ್ಷ, "ಸ್ವಾಮಿ, ನಾನು ಬಹಳ ಕಷ್ಟಪಟ್ಟು ಈ ಮಹಾಕಾವ್ಯವನ್ನು ರಚಿಸಿದ್ದೇನೆ. ಇದನ್ನು

ತಿಳಿದವರು ಪರೀಕ್ಷೆಗೆ ಒಳಪಡಿಸಲಿ ಎಂದು ಬಹುದೂರ ದೇಶದಿಂದ ಬಂದಿದ್ದೇನೆ. ಇಲ್ಲಿಗೆ ಬಂದ ಮೇಲೆ ತಮ್ಮ ಖ್ಯಾತಿ ತಿಳಿಯಿತು; ಜೊತೆಗೆ ನೀವು ನಮ್ಮ ದೇಶಬಾಂಧವರು ಎನ್ನುವುದೂ ಗೊತ್ತಾಯಿತು. ನಿಮ್ಮಂಥವರು ಕಾವ್ಯದ ಗುಣ-ಅವಗುಣಗಳನ್ನು ಮನನವಾಗುವಂತೆ ಹೇಳುತ್ತಾರೆ ಎನ್ನುವ ಆಸೆಯಲ್ಲಿ ಈಗ ಬಹುದಿನದಿಂದ ನಿಮ್ಮ ಬಳಿ ಓದುತ್ತಿದ್ದೇನೆ. ಆದರೆ ನೀವು ಒಂದು ಮಾತೂ ಆಡಿಲ್ಲ. ಬಹುಶಃ ನೀವು ನನ್ನ ಕಾವ್ಯವನ್ನು ಕೇಳಿಸಿಕೊಂಡೇ ಇಲ್ಲ ಎಂದು ಅನ್ನಿಸುತ್ತದೆ," ಎಂದು ನಿಟ್ಟುಸಿರು ಬಿಟ್ಟ.

ಕೋಕ, "ಓಹೋ, ನಿನಗೆ ಹಾಗೆನ್ನಿಸಿದೆಯೋ? ನಾನು ಯಾವುದನ್ನೂ ಪೂರ್ಣವಾಗಿ ಓದಿದ ಮೇಲೆ, ಅದರ ಲಯ, ಶಬ್ದಾರ್ಥ, ಅರ್ಥದ ಬಳಕೆ, ಅದರ ಒಳಗಣ ಸಂಬಂಧಗಳನ್ನು ಕುರಿತು ಹೇಳುವ ಅಭ್ಯಾಸ ಇರುವವನು. ಇದೆಲ್ಲ ಮಾಡಿದ ನಂತರ ಕಾವ್ಯದ ಗುಣ ಅವಗುಣ ನಿಷ್ಕರ್ಷೆಯಾಗಬೇಕು. ಈ ಕಾರಣಕ್ಕೆ ನಾನು ಇದುವರೆಗೆ ನಿನ್ನ ಕಾವ್ಯದ ಬಗ್ಗೆ ಏನೂ ಹೇಳಿರಲಿಲ್ಲ. ಆದರೆ ನಾನು ಕೇಳಿಲ್ಲ ಎಂದು ನಿನ್ನ ಅನುಮಾನ. ಇಗೋ, ಕೇಳು" ಎಂದು ಶ್ರೀಹರ್ಷ ಇದುವರೆಗೆ ಓದಿದ ಅಷ್ಟು ಕಾವ್ಯಭಾಗವನ್ನೂ ನೆನಪಿನಿಂದಲೇ ಹೇಳಿದ. ಸಂತೋಷ, ಆಶ್ಚರ್ಯಗಳಿಂದ ಶ್ರೀಹರ್ಷ ಕೋಕನ ಪಾದ ಮುಟ್ಟಿ ನಮಸ್ಕರಿಸಿದ. ಆಮೇಲೆ ಕೋಕ ಹರ್ಷನ ಕಾವ್ಯದ ಗುಣ-ಅವಗುಣಗಳನ್ನೂ ಇತರ ವಿವರಗಳನ್ನೂ ಸೋದಾಹರಣವಾಗಿ ತೋರಿಸಿಕೊಟ್ಟ. ಶ್ರೀಹರ್ಷ ತುಂಬು ಸಂತೋಷದಿಂದ ತನ್ನ ದೇಶಕ್ಕೆ ವಾಪಸ್ಸಾದ.

ಮುಳ್ಳುಗಿಡದಲ್ಲಿರುವ ಮುಳ್ಳನ್ನು ಮರೆತು ಹೂವಿನ ಸುಗಂಧವನ್ನು ದುಂಬಿ ಆಸ್ವಾದಿಸುವಂತೆ ಗುಣಜ್ಞರು ದೋಷಗಳನ್ನೇ ಹುಡುಕಿ ಹೊರಡುವುದಿಲ್ಲ. ಅವರು ಇರಬಹುದಾದ ಗುಣಗಳನ್ನಷ್ಟೇ ಅರಸುತ್ತಾರೆ.

# ವಂಚಕನ ಕತೆ

ಹೀನಕಾರ್ಯಗಳಲ್ಲಿ ಅವನು ನಿಷ್ಣಾತ; ಅವನ ಮಾತು ಮಧುರ; ಅವನ ನಡತೆ ಕ್ರೂರ; ಪರರ ಸ್ವತ್ತನ್ನು ಈತ ಅಪಹರಿಸುತ್ತಾನೆ. ಇಂಥವನನ್ನೇ ವಂಚಕ ಎನ್ನುವುದು.

ಗೋದಾವರಿ ತಟದಲ್ಲಿ ವಿಶಾಲ ಎನ್ನುವ ರಾಜ್ಯ ಇತ್ತು. ಅದರ ದೊರೆ ಸಮುದ್ರಸೇನ ಅವನಿಗೆ ಚಂದ್ರಸೇನ ಎನ್ನುವ ಮಗನೊಬ್ಬನಿದ್ದ. ಆ ಊರಿನ ವ್ಯಾಪಾರಿಯೊಬ್ಬ ಚಂದ್ರಸೇನನ ಮುಗ್ಧ ಸ್ವಭಾವವನ್ನು ಗಮನಿಸಿ,

"ಚಿರತೆಗೆ ಜಿಂಕೆ, ಗರುಡನಿಗೆ ಹಾವು, ಹದ್ದಿಗೆ ಇತರ ಪಕ್ಷಿಗಳಿರುವಂತೆ ಒಳ್ಳೆಯವರು ವಂಚಕರಿಗೆ ಆಹಾರ," ಎಂದು, 'ಈ ರಾಜಕುಮಾರ ಸರಳ ಸ್ವಭಾವದವನು ಅವನಲ್ಲಿರುವುದನ್ನು ನಾನು ಸುಲಭವಾಗಿ ದೋಚಬಹುದು. ಆದ್ದರಿಂದ ಅವನ ಸ್ನೇಹ ಬೆಳೆಸುತ್ತೇನೆ' ಎನ್ನುವ ತೀರ್ಮಾನ ಮಾಡಿಕೊಂಡ.

ಈ ದೃಷ್ಟಿಯಿಂದಲೇ ಅವನು ದೊರೆಯ ಮಗನನ್ನು ಓಲೈಸತೊಡಗಿದ. ಈ ವಂಚಕರ ಸ್ವಭಾವ ಹುಣಸೇ ಹಣ್ಣಿನಂತೆ; ಮೊದಲಲ್ಲಿ ರೋಚಕವಾಗಿದ್ದು ನಂತರ ಅ–ಸಹ್ಯವಾಗುತ್ತದೆ. ಸ್ವಲ್ಪ ಕಾಲದಲ್ಲಿಯೇ ಈತ ದೊರೆಯ ಮಗನ ಮನಸ್ಸನ್ನು ತನ್ನ ಕೈವಶ ಮಾಡಿಕೊಂಡ. ತಾನು ಹೇಳಿದುದನ್ನು ನಂಬುವಂತೆ ತನ್ನ ಪ್ರಭಾವ ಬೀರಿದ ಎಳೆಯ ಮನಸ್ಸಿನ ಕುತೂಹಲ ಕೆರಳುವಂತೆ ದೇಶವಿದೇಶಗಳ ಸೊಬಗನ್ನೂ ಅವು ನೀಡಬಲ್ಲ ಮುದಗಳನ್ನೂ ಬಣ್ಣಿಸಿ ಹೇಳಿದ. ನಂತರ ಒಂದು ದಿನ,

"ರಾಜಕುಮಾರ, ನೀನಿನ್ನೂ ಸಿಂಹಾಸನವನ್ನೇರಿಲ್ಲ. ಇನ್ನೂ ಯುವರಾಜ ನಾಗಿದ್ದೀ. ಈ ಯೌವನ ಕಾಲದಲ್ಲಿ ನೀನು ಸುಖ ಪಡಬೇಡವೇ? ಇಲ್ಲಿಯೇ ಬೇಕೆಂದಾಗ ಸಿಗುವ ರಮಣಿಯರಿಂದ ಯಾವ ಸಂತೋಷ. ನಿಜವಾದ ಸುಖ ಲಭಿಸಬೇಕಾದರೆ ನೀನು ಬೇರೆ ದೇಶಗಳಿಗೆ ಹೋಗಬೇಕು. ಆ ದೇಶಗಳಲ್ಲಿ,

"ಸುಂದರವಾದ ನದಿಗಳಿವೆ; ಕಮಲದ ಹೂಗಳು ಅರಳಿರುವ ಸರೋವರ ಗಳಿವೆ; ದಟ್ಟವಾದ ಕಾಡುಗಳೂ, ಎತ್ತರವಾದ ಪರ್ವತಗಳೂ ಇವೆ.

ಅಲ್ಲಿಯ ಸ್ತ್ರೀಯರೋ? ಶೃಂಗಾರ ಕಲೆಯಲ್ಲಿ ಬಹು ಚತುರರು, ಬಹು ಲಾವಣ್ಯವತಿಯರು. ಆದರೆ ಅಲ್ಲಿಗೆ ಹೋಗದೇ ಅವರನ್ನು ಅನುಭೋಗಿಸುವುದು ಹೇಗೆ ಸಾಧ್ಯ?'' ಎಂದ.

ಚಂದ್ರಸೇನ, "ಮಿತ್ರನೇ, ನನ್ನಲ್ಲಿ ಬಹುವಾದ ಕುತೂಹಲ ಮೂಡಿಸಿಬಿಟ್ಟೆ. ನಾವು ಅಲ್ಲಿಗೆ ಹೇಗೆ ಹೋಗಬಹುದು?''

"ರಾಜಕುಮಾರ, ಹಣವಿದ್ದರೆ ಏನನ್ನು ತಾನೇ ಮಾಡಲು ಸಾಧ್ಯವಿಲ್ಲ? ನೀನು ಹೊರಡಲು ಮನಸ್ಸು ಮಾಡಿದ್ದರೆ ನಿನ್ನದೇ ಆದ ಹಣ, ವಸ್ತ್ರಾಭರಣಗಳು ಇವೆ. ಅವನ್ನು ತೆಗೆದುಕೋ. ಆ ದೇಶಗಳಿಗೆ ಹೋಗಿ ಸುಖಪಡೋಣ.''

"ನಾನಾಗಲೇ ನಿರ್ಧರಿಸಿದ್ದೇನೆ. ಆದರೆ ಈ ವಿಷಯ ಬೇರಾರಿಗೂ ತಿಳಿಯಬಾರದು.''

"ನಿಜ, ನಾವಿದನ್ನು ಯಾರೊಂದಿಗೂ ಚರ್ಚಿಸಕೂಡದು.''

ಸ್ವಲ್ಪ ದಿನಗಳ ನಂತರ ಮೃಗಯಾ ವ್ಯಾಜದ ನೆಪದಲ್ಲಿ ರಾಜಕುಮಾರ ತನ್ನ ವಂಚಕ ಮಿತ್ರನನ್ನೂ ಕರೆದುಕೊಂಡು, ತನ್ನ ಸಕಲ ಐಶ್ವರ್ಯದೊಂದಿಗೆ ಹೊರಟ. ಸ್ವಲ್ಪ ದೂರ ಹೋದ ನಂತರ ಪರಿಜನರನ್ನೆಲ್ಲ ಕಳಿಸಿ, ತಾವಿಬ್ಬರೆ ಎರಡು ಜಾದ್ಯಶ್ಯಗಳನ್ನು ಏರಿ ಮುಂದೆ ಹೊರಟರು. ಮಧ್ಯಾಹ್ನದ ಹೊತ್ತಿಗೆ ಇಬ್ಬರಿಗೂ ಹಸಿವು, ನೀರಡಿಕೆಯಾಯಿತು. ಹತ್ತಿರದಲ್ಲೇ ಒಂದು ದೊಡ್ಡ ಮರ ಕಣ್ಣಿಗೆ ಬಿತ್ತು. ಇಬ್ಬರೂ ಅಲ್ಲಿಳಿದು ತಂದಿದ್ದ ಊಟ ಮಾಡಿ ಮಲಗಿದರು ಆಯಾಸದಿಂದ ರಾಜಕುಮಾರನಿಗೆ ಬೇಗ ನಿದ್ದೆ ಬಂತು ವಂಚಕ ಮಿತ್ರ ಅವನ ಕಾಲು ಒತ್ತಲು ಪ್ರಾರಂಭಿಸಿದ. ಅವನಿಗೆ ನಿದ್ದೆ ಚೆನ್ನಾಗಿ ಹತ್ತಿದೆ ಎಂದು ಖಾತ್ರಿಯಾದ ಕೂಡಲೇ ವಂಚಕ ಮಿತ್ರ ಎಲ್ಲ ವಸ್ತ್ರಾಭರಣಗಳನ್ನೂ, ಧನವನ್ನೂ ಗಂಟುಕಟ್ಟಿಕೊಂಡು, ಸಣ್ಣ ಚೂರಿಯೊಂದರಿಂದ ಮಲಗಿದ್ದ ರಾಜಕುಮಾರನ ಕಣ್ಣುಗಳನ್ನು ತಿವಿದು ಕುದುರೆಯೇರಿ ದೌಡಾಯಿಸಿಬಿಟ್ಟ.

ಸಹಿಸಲಸಾಧ್ಯವಾದ ನೋವಿನಿಂದ ಕಿರಿಚುತ್ತ ರಾಜಕುಮಾರನೆದ್ದು ಕೂಗಿಕೊಂಡ. ಕಣ್ಣು ಕಾಣುತ್ತಿರಲಿಲ್ಲ ಎಲ್ಲಾದರೂ ಹೋಗೋಣವೆಂದರೆ ಆ ವಂಚಕ ಅವನ ಕೈಕಾಲುಗಳೆರಡನ್ನೂ ಕಟ್ಟಿಹಾಕಿ ಬಿಟ್ಟಿದ್ದ. ದಾರಿಗಾಣದೆ ಸಂಕಟಪಡುತ್ತ ಹೊರಳಾಡುತ್ತಿರುವಾಗ ದೈವವಶಾತ್ ಅವನ ಕೈಗೆ ಕಟ್ಟಿದ್ದ ಬಳ್ಳಿ ಹರಿದು ಕೈಗಳು ಮುಕ್ತವಾದುವು. ಆದರೂ ಅವನ ಸಂಕಟವೇನೂ ಕಮ್ಮಿಯಾಗಲಿಲ್ಲ.

ರಾಜಕುಮಾರನು ಯಾವ ಮರದಡಿಯಲ್ಲಿ ಕೂತಿದ್ದನೋ ಅದೇ ಮರದಲ್ಲಿ ವಯೋವೃದ್ಧವಾದ ಒಂದು ಗಿಳಿ ಇತ್ತು. ಆ ಗಿಳಿಗೆ ಎರಡು ಗಂಡು

ಮರಿಗಳಿದ್ದುವು. ಈ ಮರಿಗಳು ವೃದ್ಧ ತಂದೆಗೆ ಆಹಾರ ತಂದು ಕೊಡುತ್ತಿದ್ದುವು. ಎಂದಿನಂತೆ ಅಂದೂ ಬಂದ ಮರಿಗಳು,

"ಅಪ್ಪ, ಇವೊತ್ತು ನರ್ಮದಾ ನದೀ ತೀರದಲ್ಲಿ ನಾವೊಂದು ಕರುಣಾಜನಕ ಅದ್ಭುತವನ್ನು ನೋಡಿದೆವು" ಎಂದವು.

"ಏನದು? ಅಂಥ ಅದ್ಭುತ? ಕರುಣಾಜನಕವೇಕೆ?"

"ಯೂಥಿಕಾಪುರ ಎನ್ನುವ ಊರಿನಲ್ಲಿ ನೀಲರಥ ಎನ್ನುವ ದೊರೆ ಇದ್ದಾನೆ ಅವನಿಗೆ ಚಿತ್ರರಥ ಎನ್ನುವ ಮಗ. ಅವನು ಕುರುಡ. ಯಾವ ಯಾವ ಪಂಡಿತರು ಏನು ವೈದ್ಯ ಮಾಡಿದರೂ ಅವನಿಗೆ ದೃಷ್ಟಿ ಬರುವಂತೆ ಮಾಡಲಾಗಲಿಲ್ಲ. ಈ ಕಾರಣದಿಂದ ಇಡೀ ರಾಜ್ಯವೇ ದೀಪವಿಲ್ಲದ ಕತ್ತಲೆಯ ಮನೆಯಂತಾಗಿದೆ ಅದನ್ನು ನೋಡಿ ನಮಗೆ ತುಂಬಾ ದುಃಖವಾಯಿತು."

"ಮಕ್ಕಳೇ ಇಂಥ ಖಾಯಿಲೆಗೂ ಔಷಧಿಯಿದೆ. ಆದರದು ವೈದ್ಯರಿಗೆ ತಿಳಿದಿಲ್ಲ."

"ಯಾವುದದು?"

"ನಾವಿರುವ ಮರದಲ್ಲೇ ಆ ಔಷಧವಿದೆ ಇದರಲ್ಲಿ ಬಿಡುವ ಹೂವನ್ನು– ಅದು ಅರಳಿರಲಿ, ಒಣಗಿರಲಿ– ಕಣ್ಣಮೇಲಿಟ್ಟುಕೊಂಡರೆ ದೃಷ್ಟಿ ಮರಳಿ ಬರುತ್ತದೆ."

ಈ ಸಂಭಾಷಣೆ ಕಿವಿಗೆ ಬಿದ್ದಕೂಡಲೇ ರಾಜಕುಮಾರ, 'ದೇವರು ನಿಜವಾಗಿಯೂ ನನ್ನ ಬಗ್ಗೆ ಕರುಣಾಮಯೀ! ಇಲ್ಲದಿದ್ದಲ್ಲಿ ಈ ಹಕ್ಕಿಗಳು ದೃಷ್ಟಿ ಮರಳಿ ಬರುವಂಥ ಔಷಧಿಯನ್ನು ಸೂಚಿಸುವುದು ಹೇಗೆ' ಎಂದು ಕೂಡಲೇ ಅಲ್ಲಿಯೇ ಬಿದ್ದಿದ್ದ ಹೂಗಳನ್ನೆತ್ತಿ ಕಣ್ಣಿಗೆ ಒತ್ತಿಕೊಂಡ. ಮೊದಲ ಬಾರಿಗೆ ನೋವು ಹೋಯಿತು; ಎರಡನೆಯ ಬಾರಿಗೆ ಪಾಪೆಗಳು ಬಂದುವು; ಮೂರನೆಯ ಬಾರಿಗೆ ದೃಷ್ಟಿ ನಿಚ್ಚಳವಾಗಿ ಎಲ್ಲ ಕಾಣುವಂತಾಯಿತು. ಸಂತೋಷದಿಂದ ಅವನು ಅಲ್ಲಿಯೇ ಕುಳಿತು ತಾನು ಮುಂದೇನು ಮಾಡಬೇಕು ಎಂದು ಆಲೋಚಿಸಿದ:

'ಈ ಸ್ಥಿತಿಯಲ್ಲಿ ನಾನು ಅರಮನೆಗೆ ಹಿಂತಿರುಗಿದರೆ ಖಂಡಿತ ಅವಮಾನವಾಗುತ್ತದೆ. ಆ ಅವಮಾನಕ್ಕಿಂತ ಸಾವೇ ವಾಸಿ. ಆದ್ದರಿಂದ ನಾನು ಹಿಂತಿರುಗುವುದಿಲ್ಲ. ಈಗ ಹೇಗೂ ನನಗೆ ಅಂಥರಿಗೆ ದೃಷ್ಟಿ ಬರಿಸುವ ಔಷಧಿ ಲಭ್ಯವಾಗಿದೆ. ನೇರವಾಗಿ ಯೂಥಿಕಾಪುರಕ್ಕೆ ಹೋಗುತ್ತೇನೆ.'

ದಾರಿಯಲ್ಲಿ ಅವರಿವರನ್ನು ಕೇಳುತ್ತ ರಾಜಕುಮಾರ ಯೂಥಿಕಾಪುರವನ್ನು ತಲುಪಿದ. ನಂತರ ದೊರೆಯನ್ನು ನೋಡಿ, ಅವನ ಮಗನ ಅಂಧತ್ವವನ್ನು

ನಿವಾರಣೆ ಮಾಡಿದ. ದೊರೆಗೆ ಪರಮ ಸಂತೋಷವಾಯಿತು. ರಾಜಕುಮಾರ ನನ್ನು ಅವನು ತನ್ನಲ್ಲಿಯೇ ಇರಿಸಿಕೊಂಡು ಅವನ ಇತಿವೃತ್ತಾಂತವನ್ನೆಲ್ಲ ತಿಳಿದುಕೊಂಡ. ತನ್ನ ಮಗಳಿಗೆ ಇವನು ಯೋಗ್ಯವಾದ ವರ ಎಂದು ಯೋಚಿಸಿ, ಚಿತ್ರಸೇನೆಯನ್ನು ಕೊಟ್ಟು ಅವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಂಡು ತನ್ನ ರಾಜ್ಯದ ನಾಲ್ಕನೇ ಒಂದು ಭಾಗವನ್ನು ಅವನಿಗೆ ಧಾರೆ ಎರೆದು ಕೊಟ್ಟ. ಅಂದಿನಿಂದ ಚಂದ್ರಸೇನ ತುಂಬ ಸಂತೋಷವಾಗಿ ತನ್ನ ಪತ್ನಿಯೊಡನೆ ಕಾಲ ಕಳೆಯುತ್ತಿದ್ದ.

ಹೀಗಿರುವಾಗ ಒಂದು ದಿನ ಯಾವುದೋ ಹಬ್ಬದ ಸಂದರ್ಭದಲ್ಲಿ ತನ್ನ ಮಾವನ ಅರಮನೆಗೆ ಹೋಗುತ್ತಿದ್ದಾಗ ಚಂದ್ರಸೇನನ ಕಣ್ಣಿಗೆ ಅವನನ್ನು ವಂಚಿಸಿದ್ದ ಹಳೆಯ ಮಿತ್ರ ಕಂಡ. ಕೂಡಲೇ ಅವನು ಕುದುರೆಯಿಂದ ಹಾರಿ ತನ್ನ ಮಿತ್ರನನ್ನು ತಬ್ಬಿಕೊಳ್ಳಲು ಹೋದ. ಆದರೆ ಯಾವಾಗ ಅವನು ಇವನನ್ನು ನೋಡಿ ಗುರುತು ಹಿಡಿದನೋ ಆ ಕ್ಷಣವೇ ಅವನು ತಿರುಗಿ ಓಡಿಹೋಗಲು ಪ್ರಾರಂಭಿಸಿದ. ರಾಜಕುಮಾರ ತನ್ನ ಹಿಂಬಾಲಕರನ್ನು ಕರೆದು ಅವನ ಬೆನ್ನಟ್ಟಿ ಅವನನ್ನು ಹಿಡಿದು ತರಲು ಆಜ್ಞಾಪಿಸಿದ. ಭಟರು ಅವನನ್ನು ಕರೆತಂದಾಗ, ರಾಜಕುಮಾರ ಅವನನ್ನು ತಬ್ಬಿಕೊಂಡು, ಕಣ್ಣೀರು ಸುರಿಸುತ್ತಾ, "ಮಿತ್ರನೇ ಹೇಗಿದ್ದೀ?" ಎಂದ. ವಂಚಕನ ಬಾಯಿಂದ ಮಾತೇ ಹೊರಡಲಿಲ್ಲ. ಮಿತ್ರ ಸಿಕ್ಕ ಸಂತೋಷದಲ್ಲಿ ರಾಜಕುಮಾರ ಅರಮನೆಗೆ ಹೋಗುವುದನ್ನು ಬಿಟ್ಟು ಅವನನ್ನು ಕರೆದುಕೊಂಡು ತನ್ನ ಮನೆಗೇ ಬಂದ. ಅಲ್ಲಿ ಅವನನ್ನು ಸುಖಾಸನದಲ್ಲಿ ಕೂರಿಸಿ,

"ಮಿತ್ರ, ಈಗ ಹೇಳು. ನೀನು ಅಂದು ನನಗೆ ಸೇರಿದ ಅಮೂಲ್ಯ ವಸ್ತುಗಳನ್ನೆಲ್ಲ ಕೊಂಡೊಯ್ದೆ. ಈಗ ಹೇಗೆ, ಏಕೆ, ಈ ಕಾರ್ಪಣ್ಯದ ಸ್ಥಿತಿಗೆ ಬಂದಿದ್ದೀ?"

"ಅದೆಲ್ಲಾ ನನ್ನ ಪಾಪಕಾರ್ಯದ ಫಲ."

"ಇಲ್ಲ, ಅದನ್ನು ಮರೆತುಬಿಡು. ಈಗಿನ ನಿನ್ನ ಸ್ಥಿತಿಗೆ ಕಾರಣ ತಿಳಿಸು."

"ಪ್ರಭೂ, ದುರಾಸೆಯಿಂದ ನಾನು ನಿಮ್ಮದೆಲ್ಲವನ್ನೂ ಅಪಹರಿಸಿದೆ. ಆ ನಂತರ ಅವೆಲ್ಲವನ್ನೂ ಒಂದು ವ್ಯಾಪಾರಿ ಹಡಗಿನಲ್ಲಿ ಸಾಗಿಸಿ, ದೂರ ದೇಶದಲ್ಲಿ ವಸ್ತುಗಳನ್ನು ಕೊಂಡು ಮಾರಿ ಅಪಾರವಾದ ಹಣ ಸಂಪಾದಿಸಿದೆ. ಅದೆಲ್ಲವನ್ನೂ ಮತ್ತೆ ಅದೇ ಹಡಗು ಹತ್ತಿಕೊಂಡು ಇಲ್ಲಿಗೆ ಬರಲು ಹೊರಟಾಗ, ಹಡಗು ಮುಳುಗಿ ಹೋಯಿತು. ನನ್ನ ಎಲ್ಲವೂ ಹೋಯಿತು. ಜೀವ ಒಂದು ಉಳಿಯಿತು. ಅದನ್ನು ನೀವು ಕೊನೆಗಾಣಿಸಿ."

"ಅಯ್ಯಾ, ಹೆದರಬೇಡ. ನಾನು ನಿನ್ನನ್ನು ಕೊಲ್ಲುವ ಉದ್ದಿಶ್ಯದಿಂದ ಹಿಡಿದು ತರಿಸಲಿಲ್ಲ. ನೀನು ನನ್ನ ಮಿತ್ರ. ಇಬ್ಬರ ಸ್ನೇಹ ಎಂದೂ ಕೊನೆಯ ತನಕ ಉಳಿಯಬೇಕು. ಹೋದದ್ದು ಹೋಯಿತು. ಅದಕ್ಕೆ ಚಿಂತಿಸಬೇಡ. ನಾನು ಈಗ ಅದಕ್ಕೂ ಮಿಗಿಲಾಗಿ ನಿನಗೆ ಒಡವೆ, ಹಣ ಕೊಡುತ್ತೇನೆ. ಅದರಿಂದ ನೀನು ಮತ್ತೆ ಬದುಕು ಪ್ರಾರಂಭಿಸು."

"ಪ್ರಭೂ, ನನ್ನ ದುಷ್ಕಾರ್ಯಗಳಿಂದ ಕಪ್ಪಿಟ್ಟು ಹೋಗಿರುವ ನನ್ನ ಹೃದಯ ನಿಮ್ಮ ಮಾತನ್ನು ನಂಬಲಾರದೆ ಹೋಗುತ್ತಿದೆ. ನಾನೆಂದೂ ನಿನ್ನ ನಿಜವಾದ ಸ್ನೇಹಿತನೇ ಆಗಿರಲಿಲ್ಲ. ಹೀಗಿದ್ದೂ ನೀವು ನನ್ನ ಬಗ್ಗೆ ಹೀಗೇಕೆ ದಯೆತೋರಿಸುತ್ತಿದ್ದೀರಿ?"

"ನನ್ನ ಕ್ರಿಯೆಗಳು ನನ್ನ ಅಧೀನದಲ್ಲಿವೆ; ನಿನ್ನ ಕ್ರಿಯೆಗಳಿಗೆ ನಾನು ಸ್ವಾಮಿತ್ವ ವಹಿಸುವುದಿಲ್ಲ. ನಾನು ನನ್ನ ರಾಜ್ಯವನ್ನೂ ನನ್ನ ಬಂಧುಗಳನ್ನೂ ಬಹು ಕಷ್ಟವಾದರೂ ತೊರೆದೆ ಏಕೆಂದರೆ ಅಲ್ಲಿ ನನ್ನ ಕ್ರಿಯೆಗೆ ನಾನು ಸ್ವಾಮಿಯಾಗಿದ್ದೆ. ನಿನ್ನ ಕ್ರಿಯೆಗಳಿಗೆ ಅಲ್ಲ ಆದರೂ ನನ್ನ ಮಿತ್ರನ ಬಗ್ಗೆ ನಾನೇಕೆ ಮೊದಲಿನಂತೆಯೆ ಮಿತ್ರತ್ವ ತೋರಬಾರದು? ಈ ಕ್ರಿಯೆಗೆ ನಾನು ಸ್ವಾಮಿ. ನಾನು ಹೇಳುವುದು ತಪ್ಪೇ?"

ವಂಚಕ ಈ ಮಾತುಗಳನ್ನು ಕೇಳಿ ನಾಚಿಕೆಯಿಂದ ಕುದ್ದು, ಮುಖ ಮುಚ್ಚಿಕೊಂಡು ಆ ಕ್ಷಣವೇ ಪ್ರಾಣತ್ಯಾಗ ಮಾಡಿದ. ಇದನ್ನು ನೋಡಿ ಚಂದ್ರಸೇನ ದುಃಖದಿಂದ ಅಳಲು ಪ್ರಾರಂಭಿಸಿದ. ಅದೇ ಅಲ್ಲಿಗೆ ಬಂದ ಪತ್ನಿ ಅವನ ದುಃಖಕ್ಕೆ ಕಾರಣ ಕೇಳಿದಾಗ ಚಂದ್ರಸೇನ ಎಲ್ಲ ಕಥೆಯನ್ನೂ ಆಕೆಗೆ ಹೇಳಿದ. "ನಾನು ಸಂಪೂರ್ಣವಾಗಿ ಅವನ ಸ್ವಾಧೀನದಲ್ಲಿದ್ದರೂ ಅವನು ನನ್ನನ್ನು ಕೊಲ್ಲಲಿಲ್ಲ. ನನ್ನ ಜೀವ ಉಳಿಸಿಹೋದ. ಅವನು ದೊಡ್ಡವನು."

"ದೊರೆಯೇ, ಅವನು ನಿನ್ನನ್ನು ದೋಚಿದವನು. ನಿನ್ನ ಜೀವ ಉಳಿಸಿದ್ದು ಬುದ್ಧಿಪೂರ್ವಕ ಎಂದು ನನಗೇನು ಅನ್ನಿಸುವುದಿಲ್ಲ."

"ಇದ್ದೀತು. ಆದರೆ ಎಂಥ ಉದಾತ್ತ ಮನುಷ್ಯ. ಅವನ ಹಿಂದಿನ ಕ್ರಿಯೆಗಳ ನೆನವು ಬಂದ ಕೂಡಲೇ ನಾಚಿಕೆಯಿಂದ ಪ್ರಾಣವನ್ನೇ ಬಿಟ್ಟನಲ್ಲ!"

ರಾಜಕುಮಾರ ಹೀಗೆ ವಂಚಕನನ್ನು ಮೆಚ್ಚಿದರೂ, ವಂಚಕ ಮಾತ್ರ ತನ್ನ ಹೀನ ಕಾರ್ಯಕ್ಕೆ ತಕ್ಕ ಹೀನ ಅಂತ್ಯವನ್ನೇ ಕಂಡ.

# ಗಿಳಿಪಾಠದ ದುಷ್ಪರಿಣಾಮ

ಹಿಂದೆ ಕೌಶಾಂಬಿ ಎನ್ನುವ ಪಟ್ಟಣವಿತ್ತು. ಆ ಪಟ್ಟಣದಲ್ಲಿ ದೇವಧರ ಎನ್ನುವ ಜ್ಯೋತಿಶ್ಶಾಸ್ತ್ರ ಪಂಡಿತನೊಬ್ಬನಿದ್ದ. ಅವನಿಗೆ ಒಬ್ಬನೇ ಮಗ. ಶಾಂತಿಧರ ಎಂದು ಅವನ ಹೆಸರು. ತಂದೆ ಪ್ರೀತಿಯಿಂದ ಮಗನಿಗೆ ವಿದ್ಯಾಭ್ಯಾಸ ಮಾಡಿಸಿದ. ಆದರೆ ಅವನೆಷ್ಟು ಮುತುವರ್ಜಿಯಿಂದ ಪಾಠ ಹೇಳಿದರೂ ಮಗನ ತಲೆಗೆ ಅದು ಹತ್ತಲೇ ಇಲ್ಲ. ಅವನು ಕಲಿಸಿದಷ್ಟೂ ಇವನು ದಡ್ಡನಾಗುತ್ತಲೇ ಹೋದ. ಆದರೆ ಪುತ್ರವ್ಯಾಮೋಹದಿಂದ ತಂದೆ ತನ್ನ ಎಲ್ಲ ಸಮಯವನ್ನು ಇವನಿಗಾಗಿಯೇ ವಿನಿಯೋಗಿಸಿ ಜ್ಯೋತಿಶ್ಶಾಸ್ತ್ರದ ಪಾಠಗಳನ್ನು ಗಟ್ಟಿ ಮಾಡಿಸಿದ; ಲೆಕ್ಕ ಮಾಡುವುದನ್ನು ಕಲಿಸಿದ. ಮಗ ಗಿಳಿ ಕಲಿಯುವಂತೆ ಅಷ್ಟನ್ನು ಮಾತ್ರ ಹೇಗೋ ಕಷ್ಟಪಟ್ಟು ಕಂಠಗತವಾಗಿಸಿಕೊಂಡ.

ಸ್ವಲ್ಪ ಕಾಲದ ನಂತರ ತಂದೆ ತನ್ನ ಮಗನನ್ನು ರಾಜನ ಆಸ್ಥಾನಕ್ಕೆ ಕರೆದು ಕೊಂಡು ಹೋಗಿ, ದೊರೆಗೆ ಆಶೀರ್ವಚನ ಮಾಡಿ, ನಿಂತ. ದೊರೆ ಪಂಡಿತನ ಮಗನತ್ತ ನೋಡಿ, "ನಿಮ್ಮ ಮಗ ಯಾವ ವಿದ್ಯೆಯಲ್ಲಿ ಪಾರಂಗತನಾಗಿದ್ದಾನೆ," ಎಂದು ಕೇಳಿದ. "ಪ್ರಭೂ, ಈತ ಜ್ಯೋತಿಶ್ಶಾಸ್ತ್ರವನ್ನು ಬಲ್ಲ. ನೀವು ಯಾವ ಸಮಸ್ಯೆಯನ್ನು ಅವನ ಮುಂದಿರಿಸಿದರೂ ಅವನು ಅದಕ್ಕೆ ಸಮರ್ಪಕ ಉತ್ತರ ಕೊಡಬಲ್ಲ," ಎಂದು ಹೇಳಿದ. ದೊರೆಗೆ ಕುತೂಹಲ ಉಂಟಾಗಿ, ತನ್ನ ಕೈಬೆರಳಿನಲ್ಲಿದ್ದ ಉಂಗುರವನ್ನು ಮುಷ್ಟಿಯಲ್ಲಿಟ್ಟುಕೊಂಡು, "ಅಯ್ಯಾ, ನನ್ನ ಕೈಲಿ ಏನಿದೆ ಎಂದು ಹೇಳಬಲ್ಲೆಯಾ?" ಎಂದು ಕೇಳಿದ.

ಮಗ ಕೂಡಲೇ ಸುದ್ದೇಮಣ್ಣಿನ ಉಂಡೆಯನ್ನು ತೆಗೆದುಕೊಂಡು ತಾನು ಗಿಳಿಪಾಠ ಮಾಡಿದ ಕ್ರಮದಲ್ಲೇ ಯೋಚಿಸಿ, "ಪ್ರಭುವೇ, ನಿಮ್ಮ ಕೈಲಿರುವುದು ಪ್ರಾಣಿ ಪ್ರಪಂಚಕ್ಕಾಗಲೀ, ಸಸ್ಯ ಪ್ರಪಂಚಕ್ಕಾಗಲೀ ಸೇರಿದ್ದಲ್ಲ; ಅದು ಲೋಹ ಪ್ರಪಂಚಕ್ಕೆ ಸೇರಿದ್ದು," ಎಂದಾಗ ದೊರೆಗೆ ಆಶ್ಚರ್ಯವಾಗಿ, "ನಿಜ, ನಿಜ. ಮುಂದೆ ಹೇಳಿ" ಎಂದ. "ಸ್ವಾಮಿ, ನಿಮ್ಮ ಕೈಲಿರುವುದು ವೃತ್ತಾಕಾರದಲ್ಲಿದೆ." "ಭೇಷ್, ಭೇಷ್. ಮುಂದೆ?" "ಈ ವೃತ್ತಾಕಾರದಲ್ಲಿರುವ ವಸ್ತುವಿನ ಮಧ್ಯೆ ಒಂದು ರಂಧ್ರವಿದೆ." "ಶಹಬ್ಬಾಸ್. ಬಹಳ ಚೆನ್ನಾಗಿ ಲೆಕ್ಕ ಹಾಕಿ ಹೇಳುತ್ತಿದ್ದೀರಿ. ಈಗ ಅದೇನೆಂದು ಹೇಳಿ" ಪಂಡಿತನ ಮಗ ರಾಜನ ಒಳ್ಳೆಯ ಮಾತುಗಳಿಂದ

ಉಬ್ಬಿಹೋದ. ಅವನ ಮೈಮೇಲೆಲ್ಲಾ ರೋಮಾಂಚನವಾಯಿತು. ಈ ಸಂತೋಷದಲ್ಲಿ ಗಿಳಿಯ ಪಾಠದ ಕ್ರಮ ಮರೆತು, "ಹೇಳುತ್ತೇನೆ. ನೇರವಾಗಿ ಹೇಳುತ್ತೇನೆ. ನಿಮ್ಮ ಕೈಲಿ ಇರುವುದು ಬೀಸೋಕಲ್ಲು" ಎಂದ. ದೊರೆ, ಆಸ್ಥಾನದವರು ಎಲ್ಲ ಬಿದ್ದು ಬಿದ್ದು ನಕ್ಕರು. ನಂತರ, "ಅಯ್ಯೋ ಪಂಡಿತ, ನೀನು ಕೆಲವು ಗ್ರಂಥಗಳನ್ನು ಓದಿ ಕಂಠಗತ ಮಾಡಿಕೊಂಡಿದ್ದೀ. ಆದರೆ ನಿನಗೆ ಸಾಮಾನ್ಯ ಜ್ಞಾನವೇ ಇಲ್ಲವಲ್ಲ. ಯಾರಾದರೂ ಅಂಗೈಯೊಳಗೆ ಬೀಸುವ ಕಲ್ಲನ್ನು ಕಾಣದ ಹಾಗೆ ಮುಚ್ಚಿಟ್ಟುಕೊಳ್ಳುವುದು ಸಾಧ್ಯವೇ?" ಎಂದು ತಂದೆ, ಮಕ್ಕಳಿಬ್ಬರನ್ನೂ ಆಸ್ಥಾನದಿಂದ ಕಳುಹಿಸಿಬಿಟ್ಟ.

# ಧನುರ್ವಿದ್ಯಾಪಾರಂಗತನ ಕತೆ

ಗ್ರಂಥಜ್ಞಾನ ಶಸ್ತ್ರಜ್ಞಾನದ ಕಿರಿಯ ಸಹೋದರ. ಇದು ಹೀಗೆಯೇ ಇರುವುದು ಸಹಜ. ಏಕೆಂದರೆ ರಾಜ್ಯ ಸುರಕ್ಷಿತವಾಗಿದ್ದ ನಂತರವೇ ಅಲ್ಲಿ ಗ್ರಂಥ ರಚನೆ, ಗ್ರಂಥಾಭ್ಯಾಸ, ನಡೆಯುವುದು ಸಾಧ್ಯ.

ಆದ್ದರಿಂದ ಯಾವುದಾದರೊಂದು ಶಸ್ತ್ರವಿದ್ಯೆಯಲ್ಲಿ ಪಾರಂಗತನಾದವನು ಕೀರ್ತಿ ಗಳಿಸುತ್ತಾನೆ, ಪೂಜ್ಯನೆನಿಸಿಕೊಳ್ಳುತ್ತಾನೆ:

ಹಿಂದೆ ಧಾರಾ ನಗರದಲ್ಲಿ ವಿವೇಕಶರ್ಮ ಎನ್ನುವ ಬ್ರಾಹ್ಮಣನೊಬ್ಬನಿದ್ದ. ಅವನಿಗೆ ಒಬ್ಬ ಮಗನಿದ್ದ. ಅವನ ಹೆಸರು ನಿರ್ವಿವೇಕ ಈ ಹುಡುಗ ವೇದಾಧ್ಯಯನ ಒಂದನ್ನೂ ಮಾಡಲಿಲ್ಲ. ಇದಕ್ಕೆ ಬದಲಾಗಿ ಇವನು ಸದಾಕಾಲವೂ ಬೇಟೆಗಾರರ ಜೊತೆ ಸೇರಿ ಕೇವಲ ಮೃಗಯಾ ವ್ಯಾಜದಲ್ಲಿ ಕಾಲ ಕಳೆದ.

ಒಂದು ದಿನ ಅವನ ತಾಯಿಗೆ ಆರೋಗ್ಯವಿಲ್ಲದ್ದರಿಂದ ಆಕೆಯನ್ನು ನೋಡಿಕೊಳ್ಳಲು ಇವನು ಮನೆಯಲ್ಲೇ ಉಳಿಯಬೇಕಾಯಿತು. ಆಕೆ ನಿದ್ರೆ ಹೋದ ನಂತರ ಇವನು ಮನೆಯ ಅಂಗಳದಲ್ಲಿ ಬಂದು ನಿಂತಾಗ ಅಲ್ಲಿಯೇ ಸಮೀಪದಲ್ಲಿದ್ದ ದೇವಸ್ಥಾನದ ಗೋಪುರದ ಬಳಿ ನೂರಾರು ಪಾರಿವಾಳಗಳು ಗಾಬರಿಯಿಂದ ಹಾರಾಡುತ್ತಾ ಶಬ್ದ ಮಾಡುತ್ತಿರುವುದನ್ನು ನೋಡಿದ. ಅವನ್ನು ನೋಡಿದ ಕೂಡಲೇ ಗೋಪುರದ ಮೇಲೆ ಹತ್ತಿದರೆ ಒಂದಿಷ್ಟು ಪಾರಿವಾಳ ಗಳನ್ನು ಸುಲಭವಾಗಿ ಹಿಡಿಯಬಹುದು ಎಂದು ಅವನಿಗೆ ಅನ್ನಿಸಿತು.

ಸ್ತ್ರೀಯರಿಲ್ಲದಿದ್ದರೆ ಲಂಪಟನಿಗೆ ಹೇಗೆ ಸುಖವಿಲ್ಲವೋ, ದುಷ್ಟನಿಗೆ ಹೇಗೆ ಎಲ್ಲ ಎಡೆಯಲ್ಲೂ ದೌಷ್ಟ್ಯವೇ ಕಾಣುತ್ತದೋ ಹಾಗೆ ಕೊಲ್ಲದಿದ್ದರೆ ಕ್ರೂರಿಯಾದವನಿಗೆ ಸಂತೋಷವಿಲ್ಲ.

ಈ ದುಷ್ಟ ಬ್ರಾಹ್ಮಣ ಹುಡುಗ ಹೀಗೆ ಪಾರಿವಾಳಗಳನ್ನು ಹಿಡಿಯಲು ದೇವಸ್ಥಾನದ ಗೋಪುರ ಏರಿದ. ಅಲ್ಲಿದ್ದ ಪಾರಿವಾಳದ ಗೂಡಿಗೆ ಅವನು ಕೈಹಾಕಿದ ಕೂಡಲೇ ಪಾರಿವಾಳದ ಮರಿಯ ಬದಲು ಅಲ್ಲಿದ್ದ ಹಾವೊಂದು ಅವನ ಕೈಗೆ ಸುತ್ತಿಕೊಂಡಿತು. ಕೈಯ ಜೊತೆ ಸುತ್ತಿಕೊಂಡ ಹಾವೂ ಹೊರಗೆ

ಬಂತು. ಅದನ್ನು ಕಂಡ ಕೂಡಲೇ ಅವನು ಗಾಬರಿಯಿಂದ ಕ್ಷಣ ಸುಮ್ಮನೇ ನಿಂತ. ಹಾವಿಂದ ಬಿಡಿಸಿಕೊಳ್ಳದಿದ್ದರೆ ಅವನು ಇಳಿಯುವಂತಿಲ್ಲ; ಬಿಡಿಸಿಕೊಂಡರೆ ಹಾವು ಕಚ್ಚುತ್ತದೆ. ಏನನ್ನೂ ಮಾಡಲಾಗದೆ ಅವನು ಗಾಬರಿಯಿಂದ ಕಿರಿಚಿಕೊಳ್ಳತೊಡಗಿದ. ಸಹಾಯಕ್ಕಾಗಿ ಕೂಗತೊಡಗಿದ. ಏಕೆಂದರೆ,

ದುಷ್ಟ ಸ್ವಭಾವದವನು ತಿಳಿದೂ ಕೆಟ್ಟ ಕೆಲಸಕ್ಕೆ ಕೈಹಾಕುತ್ತಾನೆ; ಅದರ ಫಲವನ್ನು ಕಂಡಾಗ ಮಾತ್ರ ಅವನು ಮಹಾ ಹೇಡಿಯಂತೆ ವರ್ತಿಸುತ್ತಾನೆ.

ಜನ ಅವನ ಕೂಗನ್ನು ಕೇಳಿ ಅಲ್ಲಿಗೆ ಓಡಿಬಂದರು. ಅಲ್ಲಿದ್ದ ಒಬ್ಬ ಓಡಿ ಈ ಸಮಾಚಾರವನ್ನು ಭೋಜ ಮಹಾರಾಜನ ಕಿವಿಗೂ ಹಾಕಿದ. ದೊರೆಯೂ ಬಂದು ನೋಡಿದ. ಅವನಿಗೆ 'ಅಯ್ಯೋ' ಅನ್ನಿಸಿತು: ಹುಡುಗ ಒಂದು ಕೈಯಲ್ಲಿ ಹಾವಿನ ಕತ್ತು ಹಿಡಿದು ನಡುಗುತ್ತಿದ್ದಾನೆ; ಇನ್ನೊಂದು ಕೈಯಿಂದ ಆಗಲೋ ಈಗಲೋ ಬೀಳುವವನಂತೆ ದೇವಸ್ಥಾನದ ಗೋಪುರದ ಒಂದು ಭಾಗವನ್ನು ಹಿಡಿದು ಜೋತಾಡುತ್ತಿದ್ದಾನೆ ಇವರೆಲ್ಲ ಸೇರಿ ಯೋಚಿಸಿದರೂ ಹುಡುಗನನ್ನು ಉಳಿಸುವ ಮಾರ್ಗ ಹೊಳೆಯಲಿಲ್ಲ. ಆಗ ಭೋಜ "ಈ ಬಾಲಕನನ್ನು ಉಳಿಸಿದ ವೀರನಿಗೆ ಲಕ್ಷ ಹೊನ್ನು ಕೊಡುತ್ತೇನೆ" ಎಂದು ಸಾರಿಸಿದ

ಅದೇ ಊರಿನಲ್ಲಿದ್ದ ರಜಪೂತ ಕುಲದ ಸಿಂಹಳ ಎನ್ನುವ ಧನುರ್ವಿದ್ಯಾ ನಿಪುಣನ ಕಿವಿಗೆ ಈ ಸುದ್ದಿ ತಲುಪಿತು. ಅವನು ಕೂಡಲೇ ಅಲ್ಲಿಗೆ ಬಂದು, "ಪ್ರಭೂ, ಇವನನ್ನು ಉಳಿಸುವುದು ಅಂಥ ಕಷ್ಟವೇನಲ್ಲ. ಹಾವು ಸುತ್ತಿಕೊಂಡಿರುವ ಕೈಯನ್ನು ಅವನು ಅಲ್ಲಾಡಿಸದೇ ನಿಲ್ಲಲಿ. ಸಾಕು" ಎಂದ. ಹುಡುಗ ಹಾಗೆಯೇ ನಿಂತ. ಸಿಂಹಳ ಬಿಲ್ಲಿಗೆ ಅರ್ಧಚಂದ್ರಾಕೃತಿಯ ಬಾಣ ಹೂಡಿ, ಗುರಿ ಇಟ್ಟು ಆ ಹಾವಿನ ತಲೆಯನ್ನು ಕತ್ತರಿಸಿ ಹಾಕಿದ. ಮರುಕ್ಷಣದಲ್ಲೇ ಹಾವಿನ ಶರೀರ ತಾನಾಗಿಯೇ ಹುಡುಗನ ಕೈಯಿಂದ ಕಳಚಿ ಬಿತ್ತು. ಚೂರೂ ಗಾಯವಿಲ್ಲದೆ ಹುಡುಗ ಕ್ಷೇಮವಾಗಿ ಕೆಳಕ್ಕೆ ಇಳಿದು ಬಂದ.

ದೊರೆ ಸಿಂಹಳನನ್ನು ಹೊಗಳಿ ಅವನಿಗೆ ಲಕ್ಷ ವರಹಗಳನ್ನಿತ್ತ. ಯಾವುದಾದರೂ ವಿದ್ಯೆಯ ಮೇಲಿನ ಯಾಜಮಾನ್ಯದಿಂದ ಸಾಧಿಸಲಾರದ್ದು ಏನಿದೆ?

# ಗ್ರಂಥಜ್ಞಾನಿಯ ಕತೆ

ಯಾರು ಆಳವಾಗಿ ಓದಿ, ಅರ್ಥವನ್ನು ಗ್ರಹಿಸಿದ್ದಾರೋ, ಯಾರು ತರ್ಕವಿಜ್ಞಾನಗಳ ಮೇಲೆ ಪ್ರಭುತ್ವ ಪಡೆದಿರುತ್ತಾರೋ, ಯಾರ ಕೀರ್ತಿ ಅವರ ಪಾಂಡಿತ್ಯವನ್ನು ಅವಲಂಬಿಸಿರುತ್ತದೋ ಅವರು ನಿಜವಾದ ಗ್ರಂಥ ಜ್ಞಾನಿಗಳು.

ಒಂದು ದಿನ ಉಜ್ಜಯಿನಿಯ ದೊರೆ ವಿಕ್ರಮಾದಿತ್ಯನ ಆಸ್ಥಾನಕ್ಕೆ ಒಬ್ಬ ಬ್ರಾಹ್ಮಣ ಬಂದ. ಅವನು ಸಹಿಸಲಸಾಧ್ಯವಾದ ತಲೆನೋವಿನಿಂದ ನರಳುತ್ತಿದ್ದು, "ಪ್ರಭೂ, ಪ್ರಜೆಗಳನ್ನು ಕಾಪಾಡುವುದು ದೊರೆಯ ಕರ್ತವ್ಯ. ಅದರಲ್ಲೂ ಯಾರು ಸಂಕಟದಲ್ಲಿರುತ್ತಾರೆ, ವ್ಯಾಧಿಗೆ ಸಿಲುಕಿರುತ್ತಾರೋ ಅಂಥವರನ್ನು ನೋಡಿಕೊಳ್ಳುವುದು ಅವನ ಆದ್ಯ ಕರ್ತವ್ಯ. ಆದ್ದರಿಂದ, ತಾವು ನನ್ನನ್ನು ಈ ಶಿರೋವೇದನೆಯಿಂದ ಪಾರುಮಾಡಬೇಕು" ಎಂದ.

ದೊರೆ ಆ ಬ್ರಾಹ್ಮಣನ ವೇದನೆಯನ್ನು ನೋಡಿ ಅನುಕಂಪದಿಂದ ಕರಗಿ ತನ್ನ ಆಸ್ಥಾನದ ಜ್ಯೋತಿಷ್ಯ ವರಾಹನನ್ನು ಕರೆಸಿ, "ಇವನ ವೇದನೆಗೆ ಏನು ಪರಿಹಾರ" ಎಂದು ಕೇಳಿದ "ಈ ಬ್ರಾಹ್ಮಣ ಮಧುಪಾನ ಮಾಡಿದರೆ ಮಾತ್ರ ಉಳಿಯುತ್ತಾನೆ" ಎಂದು ವರಾಹ ಹೇಳಿದ. ದೊರೆ ಆಶ್ಚರ್ಯಚಕಿತನಾಗಿ, "ಸ್ವಾಮಿನ್, ವೇದ ಪಾರಂಗತರಾದ ನೀವು ಇದೇನು ಅಪ್ಪಣೆ ಕೊಡಿಸುತ್ತಿದ್ದೀರಿ! ಮಾಡಬಾರದ್ದನ್ನು ಈತ ಹೇಗೆ ಮಾಡಬಲ್ಲ? ಬ್ರಾಹ್ಮಣ ಹೇಗೆ ಮಧುಪಾನಕ್ಕೆ ಕೈಹಾಕಬಲ್ಲ?" ಎಂದು ಕೇಳಿ ನಂತರ ತನ್ನ ಆಸ್ಥಾನ ವೈದ್ಯನಾದ ಹರಿಶ್ಚಂದ್ರನನ್ನು ಕರೆದು 'ಈ ವ್ಯಾಧಿಗೆ ಉಪಶಮನ ಹೇಗೆ, ತಿಳಿಸಿ' ಎಂದ.

ವೈದ್ಯ ಬ್ರಾಹ್ಮಣನನ್ನು ಪರೀಕ್ಷಿಸಿ, "ಪ್ರಭೂ, ಈತನ ಮೆದುಳಿನಲ್ಲಿ ಬ್ರಹ್ಮಕೀಟ ಹೊಕ್ಕಿದೆ. ಅದಕ್ಕೆ ಮದ್ದೇ ಇಲ್ಲ" ಎಂದ.

"ದೇವರು ವ್ಯಾಧಿಯನ್ನು ಸೃಷ್ಟಿಮಾಡಿ ಅದಕ್ಕೆ ತಕ್ಕ ಔಷಧಿ ನಿರ್ಮಿಸಿಲ್ಲ ಎನ್ನುವುದು ಸಹಜವಾಗಿ ಕಾಣುವುದಿಲ್ಲ."

"ಪ್ರಭೂ, ಈ ರೋಗಕ್ಕೆ ಔಷಧಿ ಇಲ್ಲ ಎಂದಿಲ್ಲ. ಆದರೆ ಅದನ್ನು ಈ ಬ್ರಾಹ್ಮಣ ಸೇವಿಸುವಂತಿಲ್ಲ."

"ಏಕೆ"

"ಈ ಬ್ರಹ್ಮಕೀಟ ಮನುಷ್ಯನ ಮೆದುಳನ್ನು ಕೊರೆದು ತಿನ್ನುತ್ತದೆ. ಅದಕ್ಕೆ ಅವನಿಗೆ ಇಷ್ಟು ಬಾಧೆ. ಈ ಕೀಟ ಬೆಂಕಿಯಲ್ಲಿ ಬೇಯುವುದಿಲ್ಲ; ನೀರಿನಲ್ಲಿ ನೆನೆಯುವುದಿಲ್ಲ; ಶಸ್ತ್ರದಿಂದ ಹತವಾಗುವುದಿಲ್ಲ. ಅದನ್ನು ನಿವಾರಿಸಬಲ್ಲದ್ದು ಒಂದೇಃ ಮದ್ಯ!"

"ಆದರೆ ನಾನು ಮದ್ಯಪಾನ ಮಾಡುವಂತೆ ಈ ಬ್ರಾಹ್ಮಣನಿಗೆ ಹೇಗೆ ಹೇಳಲಿ?"

"ಹೇಳದಿದ್ದರೆ ಅವನು ನಿಸ್ಸಂಶಯವಾಗಿ ಸಾಯುತ್ತಾನೆ"

ದೊರೆಗೆ ಏನು ಮಾಡಲು ತೋಚದೆ, ಎಲ್ಲ ಶಾಸ್ತ್ರಗಳ ಮೇಲೂ ಪಾಂಡಿತ್ಯ ಸಂಪಾದಿಸಿದ ಶಬರ ಸ್ವಾಮಿಯನ್ನು ಕರೆಸಿ ಸಲಹೆ ಕೇಳಿದ

ಶಬರಸ್ವಾಮಿ, "ಇಲ್ಲಿ ವಾಸಿಯಾಗಲಾರದ ವ್ಯಾಧಿಯೊಂದಿದೆ. ಅದಕ್ಕಿರುವ ಒಂದೇ ಔಷಧಿ ಮದ್ಯ. ಆದ್ದರಿಂದ ಜೀವ ಉಳಿಸಿಕೊಳ್ಳಲು ಇಚ್ಛಿಸಿದಲ್ಲಿ ಈ ಬ್ರಾಹ್ಮಣ ಮದ್ಯಪಾನ ಮಾಡಬಹುದು. ಅದರಿಂದ ಅವನ ಬ್ರಾಹ್ಮಣತ್ವಕ್ಕೇನೂ ಬಾಧಕವಿಲ್ಲ" ಎಂದ

ದೊರೆ ಬ್ರಾಹ್ಮಣನಿಗೆ ಮದ್ಯಪಾನ ಮಾಡಲು ಹೇಳಿದ ಸೇವಕರು ಒಂದು ಬಟ್ಟಲಿನಲ್ಲಿ ಮದ್ಯ ತಂದಿಟ್ಟರು ಬ್ರಾಹ್ಮಣ ಅದನ್ನು ಕೈಗೆತ್ತಿಕೊಂಡ. ಕೂಡಲೇ ಅಶರೀರವಾಣಿ ಮೊಳಗಿತುಃ "ಶಬರಸ್ವಾಮಿ, ನೀನು ಎಲ್ಲೆ ಮೀರಿ ನಡೆಯುತ್ತಿದ್ದೀ!" ಅದನ್ನು ಕೇಳಿ ಶಬರಸ್ವಾಮಿ, "ಬ್ರಾಹ್ಮಣ ಅಂಜಬೇಡ. ಈ ಅಶರೀರವಾಣಿಗೆ ಕೇವಲ ಅಕ್ಷರ ನಿಯಮದ ಅರಿವಿದೆ; ಆದರೆ ಅಕ್ಷರಾರ್ಥ ತಿಳಿಯದು. ಧರ್ಮದ ಆಚರಣೆಯನ್ನು ಅದೇನು ಬಲ್ಲದು," ಎಂದ. ಕೂಡಲೇ ಅವನ ತಲೆಯ ಮೇಲೆ ಆಕಾಶದಿಂದ ಪುಷ್ಪವೃಷ್ಟಿಯಾಯಿತು.

ಬ್ರಾಹ್ಮಣ ಮದ್ಯ ತುಂಬಿದ ಬಟ್ಟಲನ್ನು ತೆಗೆದುಕೊಂಡು ಕುಡಿಯಲು ಯತ್ನಿಸಿದ. ಆದರೆ ಹುಟ್ಟಿದಾರಭ್ಯ ಯಾವುದನ್ನು ಮಾಡಬಾರದು ಎನ್ನುವುದು ಅವನ ಮನಸ್ಸಿನ ಆಳದಲ್ಲಿತ್ತೋ ಅದು ಅವನನ್ನು ಕುಡಿಯಗೊಡಲಿಲ್ಲ. ಮದ್ಯದ ಕಟು ವಾಸನೆಯಿಂದಲೇ ಅವನು ವಿಚಲಿತನಾಗಿ ಹೋದ. ಅದೇ ಕ್ಷಣದಲ್ಲೇ ಆ ಬ್ರಹ್ಮಕೀಟ ಅವನ ಮೂಗಿನಿಂದ ಹೊರಬಂದು ಅವನ ನೋವೂ ನಿವಾರಣೆಯಾಯಿತು

ಆಗ ದೊರೆ, "ನಿನ್ನ ಗ್ರಂಥಜ್ಞಾನ ಯಾವ ಬಗೆಯದು? ನೀನು ಅವನಿಗೆ ಮದ್ಯಪಾನ ಮಾಡಲು ಹೇಳಿದೆ. ಆದರೆ ಅದರ ವಾಸನೆಯಿಂದಲೇ ಅವನ ವ್ಯಾಧಿ ವಾಸಿಯಾಯಿತಲ್ಲ?" ಎಂದು ಕೇಳಿದ.

ವೈದ್ಯ, "ಪ್ರಭೂ, ನಾನು ಕುಡಿಯಲು ಆಜ್ಞಾಪಿಸದೇ ಇದ್ದಿದ್ದರೆ, ಅವನು ಕುಡಿಯುವ ಪ್ರಯತ್ನ ಮಾಡದಿದ್ದರೆ, ಮದ್ಯದ ವಾಸನೆ ಬ್ರಾಹ್ಮಣನ ಮೆದುಳನ್ನು ಹೊಗುತ್ತಿರಲಿಲ್ಲ. ಆ ಕೀಟ ಹೊರ ಬರುತ್ತಲೂ ಇರಲಿಲ್ಲ. ಆದ್ದರಿಂದಲೇ ನಾನು ಅವನಿಗೆ ಅದನ್ನು ಕುಡಿಯಲು ಹೇಳಿದ್ದು" ಎಂದ.

"ಸರಿಯಾದ, ಖಚಿತವಾದ ಜ್ಞಾನ ನಿಮ್ಮದು" ಎಂದು ದೊರೆ ವೈದ್ಯನನ್ನೂ ಶಬರಸ್ವಾಮಿಯನ್ನೂ ಅಭಿನಂದಿಸಿದ.

# ವೇದಪಾರಂಗತನ ಕತೆ

ಯಾರು ವೇದಗಳನ್ನು ವೇದದ ಉಪಾಂಗಗಳನ್ನು ಕರಗತ ಮಾಡಿಕೊಂಡಿರುತ್ತಾನೋ ಅವನೇ ವೇದಪಾರಂಗತ

ಹಿಂದೆ ಅವಂತೀ ನಗರದಲ್ಲಿ ಪ್ರಿಯ ಶೃಂಗಾರ ಎನ್ನುವ ಒಬ್ಬ ದೊರೆ ಇದ್ದ. ಒಂದು ದಿನ ಅರಮನೆಯ ಮಾಳಿಗೆಯ ಮೇಲೆ ಅವನು ನಿಂತಿದ್ದಾಗ ಅದೇ ತಾನೇ ಸ್ನಾನ ಮಾಡಿ ಹಿಂತಿರುಗುತ್ತಿದ್ದ ಯುವತಿಯೊಬ್ಬಳು ಅವನ ಕಣ್ಣಿಗೆ ಬಿದ್ದಳು. ಆಕೆಯ ಹೆಸರು ಮಾಲತಿ; ಅವಂತೀ ನಗರದ ಗಣ್ಯ ವರ್ತಕ ಪ್ರಚುರಧನನ ಮಗಳು; ಮದುವೆಯಾದವಳು. ದೊರೆ ಅವಳ ಲಾವಣ್ಯವನ್ನು ಕಂಡು, ಮನ್ಮಥನಿಂದ ಪ್ರಚೋದಿತನಾಗಿ, ಅವಳತ್ತಲೇ ನೋಡುತ್ತ ನಿಂತುಬಿಟ್ಟ. ಕವಿವಾಣಿ ಹೇಳುವಂತೆ:

ಸುಂದರವಾದ ಮುಖ; ಸೆರೆ ಹಿಡಿಯುವ ಹುಬ್ಬು; ಕಾಂತಿ ಪಸರಿಸುವ ಕಿರುನಗೆ; ಲಜ್ಜಾಯುಕ್ತ ಕಣ್ಣೋಟ; ಅದರಿಂದ ಮಿಂಚುವ ಬೆಳಕಿನ ಮಿಂಚು; ಇಂಥ ಮುಖ ಕಂಡಾಗ ಸ್ವರ್ಗಕ್ಕಾಗಲೀ, ಅಮರತ್ವಕ್ಕಾಗಲೀ ಯಾರು ಚಿಂತಿಸುತ್ತಾರೆ? ರಾಜಪದವಿಗೆ ಯಾರು ಹಾತೊರೆಯುತ್ತಾರೆ?

ದೊರೆ ಕೂಡಲೇ ಒಬ್ಬ ಕುಂಟಣಗಿತ್ತಿಯನ್ನು ವರ್ತಕನ ಪತ್ನಿಯ ಬಳಿಗೆ ಅಟ್ಟಿದ. ಆಕೆ ಬಂದು,

"ಮಾಲತಿ, ನೀನು ಅದೃಷ್ಟಶಾಲಿ. ನೂರಾರು ಜನ ಲಾವಣ್ಯವತಿಯರು ದೊರೆಯ ಒಂದು ಕಣ್ಣು ಸನ್ನೆಗೆ ಕಾದು ನಿಂತಿದ್ದರೂ ಅವನು ನಿನ್ನಲ್ಲಿ ಮಾತ್ರ ಅನುರಕ್ತನಾಗಿದ್ದಾನೆ. ಆದ್ದರಿಂದ ಬಾ, ಸ್ವಲ್ಪ ಕಾಲ ದೊರೆಯ ಮನಸ್ಸನ್ನು ರಂಜಿಸಿ, ಅವನ ಮನೋರಥವನ್ನು ಪೂರ್ಣಗೊಳಿಸು. ನಿನ್ನ ಯೌವನ, ನಿನ್ನ ರೂಪು ಎರಡೂ ತೃಪ್ತಿ ಹೊಂದಿ, ನಿನಗೆ ಅಪಾರವಾದ ವಸ್ತ್ರಾಭರಣಗಳ ಉಡುಗೊರೆ ತರಲಿ" ಎಂದಳು.

"ಅಯ್ಯೋ, ಮುದಿ ಗೂಬೆ! ಎಂಥ ಮಾತು ಆಡುತ್ತೀ. ನಾನು ಕುಲೀನ ಸ್ತ್ರೀ. ಸದ್ವಂಶದಿಂದ ಬಂದವಳು. ನನ್ನ ಪತಿಯನ್ನಲ್ಲದೇ ನಾನು ಬೇರೆ ಯಾರನ್ನು ಮನದಲ್ಲಿಯಾದರೂ ನೆನೆದರೆ ಅದು ಪಾಪ. ನನ್ನ ಪತಿಯನ್ನುಳಿದು ಬೇರೆ ಎಲ್ಲ

ಗಂಡಸರೂ ನನಗೆ ಪಿತೃ ಸಮಾನರು. ತೊಲಗಿ ಹೋಗು ಇಲ್ಲಿಂದ! ಮತ್ತೆ ಇದನ್ನೂ ತಿಳಿದುಕೋ. ನಮ್ಮ ಜನಕರು ನಮ್ಮ ತಾಯಿ–ತಂದೆಯರು; ಆದರೆ ಅವರನ್ನು ಕಾಪಾಡುವವನು ದೊರೆ. ಅವನಿಗೆ ಅದಕ್ಕೆ ಹೆಚ್ಚು ಗೌರವವಿರುವುದು.''

''ಹಾ, ಮಧುರಭಾಷಿಣಿ, ಯೋಚಿಸು. ನಿನ್ನ ಪತಿ ಈಗ ವ್ಯಾಪಾರದ ವ್ಯಾಜದಲ್ಲಿ ದೂರ ದೇಶಕ್ಕೆ ಹೋಗಿದ್ದಾನೆ. ನೀನು ನಿನ್ನ ತಂದೆಯ ಮನೆಯಲ್ಲಿ ಇದ್ದುಕೊಂಡು ನಿನ್ನ ಯೌವನವನ್ನು ವೃಥಾ ಕಳೆದುಕೊಳ್ಳುತ್ತಿದ್ದೀಯೆ ಮತ್ತೆ, ದೊರೆಯ ಬಗ್ಗೆ ಅಹಂಕಾರದಿಂದ ತಿರಸ್ಕಾರದಿಂದ ಮಾತನಾಡುತ್ತಿದ್ದೀ. ಇದೆಂಥ ಅಸಹಜ ನಡವಳಿಕೆ?

ನಿನ್ನ ಮುಖ ಪೂರ್ತಿ ಅರಳಿರುವ ಕಮಲ ಪುಷ್ಪದಂತಿದೆ; ನಿನ್ನ ಕಣ್ಣುಗಳು ವಿಶಾಲವಾಗಿ; ದೀರ್ಘವಾಗಿ ನಿನ್ನ ಕಿವಿಯವರೆಗೂ ಲಂಬಿಸಿವೆ; ನಿನ್ನ ನಿತಂಬಗಳು ತುಂಬಿ ನಿಂತು ಭಾರದಿಂದ ಜಗ್ಗುತ್ತಿವೆ; ಕುಚಗಳೋ ಒಂದು ಇನ್ನೊಂದರ ಸೀಮೆಯನ್ನು ವಶಪಡಿಸಿಕೊಳ್ಳಲು ಯತ್ನಿಸುತ್ತಿರುವಂತೆ, ಎತ್ತರವಾಗಿ ತುಂಬಿ ನಿಂತಿವೆ. ಈ ವರೆಗೆ ನೀನು ಕುಲೀನ ಸಂಪ್ರದಾಯದ ನಿಯಮಗಳನ್ನು ಮುರಿದೇ ಇಲ್ಲವಾದರೆ ಮನ್ಮಥ ನಿನ್ನನ್ನು ಇಂಥ ಸುಂದರಿಯನ್ನಾಗಿ ಸೃಷ್ಟಿಸಿರುವುದು ಅನುಪಯುಕ್ತವೇ ಸರಿ.

ಹೇಳು, ನಿನ್ನ ಮುಗ್ಧತೆಯನ್ನು ನೀನು ಹೇಗೆ ಉಳಿಸಿಕೊಳ್ಳಬಲ್ಲೆ? ಯೌವನ ಎಬ್ಬಿಸುವ ಕೋಲಾಹಲದಲ್ಲಿ ಯಾರು ಶುದ್ಧವಾಗಿ ಉಳಿಯಬಲ್ಲರು? ಅದರಲ್ಲೂ ಪತಿ ದೂರದೇಶದಲ್ಲಿ ಇರುವಾಗ, ಯೌವನದ ಮುಷ್ಟಿಯಲ್ಲಿರುವ ಹೆಂಗಸು ಒಬ್ಬಳೇ ಹೇಗೆ ಇರುವುದು ಸಾಧ್ಯ? ನೀನು ಯಾರನ್ನಾದರೂ ಕೂಡಲೇಬೇಕು. ಇಲ್ಲದಿದ್ದರೆ ಮನ್ಮಥ ಬಾಧೆ ಅಡಗುವುದು ಹೇಗೆ? ಬಾ, ದೊರೆಯಲ್ಲಿ ಆಶ್ರಯ ಸ್ವೀಕರಿಸು.''

''ದುಷ್ಟೆ, ಮತ್ತೆ ನೀನಿಂಥ ಮಾತಾಡಬೇಡ. ಉಳಿದವರೊಂದಿಗೆ ನನ್ನನ್ನು ಏಕೆ ಹೋಲಿಸುತ್ತೀ? ನನಗೇಕೆ ಆಮಿಷಗಳನ್ನು ಒಡ್ಡುತ್ತಿದ್ದೀ? ನನ್ನ ಮನಸ್ಸು ಏನಾದರೂ ಬದಲಾಗುವುದಿಲ್ಲ. ನೀನು ಹೊರಟು ಹೋಗು.''

ಹಿಂತಿರುಗಿ ಬಂದ ಕುಂಟಣಿಯಿಂದ ಎಲ್ಲವನ್ನು ಕೇಳಿ ತಿಳಿದ ದೊರೆಗೆ ಅಸಾಧ್ಯವಾದ ಕ್ರೋಧ ಬಂತು. ಅವನು ತನ್ನ ನಮ್ರ ಸಚಿವರಲ್ಲಿ ಒಬ್ಬನನ್ನು ಕರೆದು ಆ ಯುವತಿಯ ಬಗ್ಗೆ ಕಟ್ಟು ಕತೆ ಕಟ್ಟಿ, ಅವಳ ಚಾರಿತ್ರ್ಯ ವಧೆ ಮಾಡುವಂತೆ ಹೇಳಿದ. ಅನತಿ ಕಾಲದಲ್ಲಿಯೇ ಜನರು ಮಾಲತಿಯ ಬಗ್ಗೆ ಅನೇಕ

ವಿಧವಾದ ವೃತ್ತಾಂತಗಳನ್ನು ಕೇಳಿದರು. ಕಿವಿಯಿಂದ ಕಿವಿಗೆ ಇದು ಹರಡಿ, ಆಕೆ ಜಾರಿಣಿ ಎಂದು ಪ್ರಚುರವಾಗಿ, ಅವಳ ಬಂಧು ಬಾಂಧವರೂ ಅವಳೊಡನೆ ಸಂಪರ್ಕ ಕಡಿದುಕೊಂಡರು ಹಿಂತಿರುಗಿ ಬಂದ ಗಂಡನೂ ಈ ಹೇಳಿಕೆಗಳಿಗೆ ಕಿವಿಗೊಟ್ಟು ಅವಳನ್ನು ತೊರೆದುಬಿಟ್ಟ. ಯಾವ ದುಂಬಿಯಿಂದಲೂ ಆಘ್ರಾಣಿಸಲ್ಪಡದ ಮಲ್ಲಿಗೆಯಂತೆ ಮಾಲತಿ ಒಣಗಿಹೋದಳು ಆದರೆ ತಾನು ನಿಷ್ಕಳಂಕಳು ಎಂದು ಆಕೆಗೆ ತಿಳಿದಿದ್ದರಿಂದ ಎಲ್ಲರ ಸಮ್ಮುಖದಲ್ಲಿ ಅವಳು ದಿವ್ಯ ಪರೀಕ್ಷೆಗೆ ತನ್ನನ್ನೇ ಗುರಿಮಾಡಿಕೊಂಡು, ಕುದಿಯುವ ಎಣ್ಣೆಯ ಕೊಪ್ಪರಿಗೆ ಯಿಂದ ಹುರುಳೀ ಕಾಳುಗಳನ್ನು ತೆಗೆದಳು; ಆಕೆಯ ಕೈ ಒಂದು ಚೂರಾದರೂ ಸುಡಲಿಲ್ಲ ಆಕೆ ಶಂಕಾತೀತಳಾಗಿ ಹೊರಬಂದು ಮತ್ತೆ ತನ್ನ ಪತಿಯ ಜೊತೆ ಸುಖವಾಗಿದ್ದಳು

ಮಾಲತಿ ಈ ದಿವ್ಯ ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸಿದಳು ಎಂದು ತಿಳಿದ ತಕ್ಷಣವೇ ದೊರೆಯ ಕೋಪ ಹೆಚ್ಚಾಗಿ, ಅವಳ ಮೇಲೆ ಹೇಗಾದರೂ ಪ್ರತೀಕಾರ ಸಾಧಿಸಲು ಹಟತೊಟ್ಟ ಸಾಮವೇದ ಪಾರಂಗತನಾದ ವೇದಶರ್ಮ ನನ್ನು ಬರಹೇಳಿ, “ಎಲವೋ, ಸಾಮಪಾರಕ, ಇದೇನಿದು? ನನ್ನ ಅಧಿಕಾರಿಗಳು ಪರೀಕ್ಷೆ ಮಾಡಿ ನಂತರ ಜಾರಿಣಿ ಎಂದು ಸಾರಿದ್ದ ಹೆಂಗುಸೊಬ್ಬಳು ದಿವ್ಯ ಪರೀಕ್ಷೆಯಲ್ಲಿ ಹೇಗೆ ಗೆದ್ದಳು? ನೀನೆಂಥ ಮಂತ್ರಪಠನ ಮಾಡುತ್ತೀ?” ಎಂದು ಕೇಳಿದ.

“ಪ್ರಭೂ, ಅವಳು ಜಾರಿಣಿಯಲ್ಲ. ಯಾವ ಜಾರಿಣಿಯೂ ಇಂಥ ಪರೀಕ್ಷೆಯಲ್ಲಿ ಗೆಲ್ಲಲಾಗುವುದಿಲ್ಲ ಎಲ್ಲಿ ಅಗ್ನಿದೇವನೇ ನ್ಯಾಯಮೂರ್ತಿಯೋ ಎಲ್ಲಿ ನಾನೇ ಸಾಮವೇದ ಪಠನ ಮಾಡುತ್ತೇನೋ ಅಲ್ಲಿ ನಿರಪರಾಧಿಗೆ ಶಿಕ್ಷೆ ಇಲ್ಲ; ಅಪರಾಧಿಗೆ ಬಿಡುಗಡೆಯೂ ಇಲ್ಲ.”

“ಏನು ಅಗ್ನಿ? ಏನು ನಿನ್ನ ಸಾಮಪಠನ? ಎಲ್ಲ ಸುಳ್ಳಿನ ಕಂತೆ! ಜಾರಿಣಿಯೊಬ್ಬಳು ನಿನ್ನ ಪರೀಕ್ಷೆಯಲ್ಲಿ ಗೆದ್ದಳು ಎಂದ ಮೇಲೆ ನಿನ್ನ ಪರೀಕ್ಷೆಗೆ ಯಾವ ಬೆಲೆ? ಇವಳು ಇದರಲ್ಲಿ ಗೆದ್ದು ಬಂದ ಮೇಲೆ, ನಮ್ಮ ಊರಿನ ಯಾವ ವೇಶ್ಯೆಯೂ, ಬೆಲೆವೆಣ್ಣು ಇಂಥ ಪರೀಕ್ಷೆಗಳನ್ನು ಗೆಲ್ಲುತ್ತಾಳೆ ನಿನ್ನ ದಿವ್ಯ ಪರೀಕ್ಷೆಗೆ ಇಷ್ಟು ಬೆಂಕಿ ಬೀಳಲಿ!”

“ಪ್ರಭೂ, ಹಾಗಿದ್ದರೆ ಪರೀಕ್ಷೆ ನಡೆಯಲಿ. ಅಗ್ನಿಯನ್ನು ನಾವು ಅಲ್ಲಿ ತರುವ ಅಗತ್ಯವಿಲ್ಲ ನಾನು ಕೇವಲ ಸಾಮಮಂತ್ರ ಪಠನ ಮಾಡುತ್ತೇನೆ. ಯಾರಾದರೂ ವೇಶ್ಯೆ ಈ ಪರೀಕ್ಷೆಯಲ್ಲಿ ಗೆದ್ದರೆ ಎಲ್ಲದರ ಪರೀಕ್ಷೆಯೂ ಆಗುತ್ತದೆ.”

ಮಾರನೆಯ ದಿನ ವೇದಶರ್ಮ ಒಂದು ತಾಮ್ರದ ಪಾತ್ರೆಯಲ್ಲಿ ನೀರನ್ನು ತಂದು, ಮಂತ್ರಸಹಿತವಾಗಿ ತಾನು ಧರಿಸಿದ್ದ ಬಂಗಾರದ ಉಂಗುರವನ್ನು ಅದರಲ್ಲಿ ಹಾಕಿದ. ನಂತರ ಅಲ್ಲಿಗೆ ದೊರೆ ಕರೆಸಿದ್ದ ಹೆಣ್ಣನ್ನು ಕುರಿತು, "ನೀನು ನಿಷ್ಕಳಂಕಳಾಗಿದ್ದಲ್ಲಿ ನೀರಿನಿಂದ ಈ ಉಂಗುರವನ್ನು ಹೊರಕ್ಕೆ ತೆಗಿ," ಎಂದ. ದೊರೆಯ ಅಪ್ಪಣೆಯಂತೆ ಆಕೆ ತನ್ನ ಗಂಡನನ್ನು ಬಿಟ್ಟು ಬೇರೆ ಯಾವ ಪುರುಷ ಸಂಪರ್ಕವೂ ಇಲ್ಲ ಎಂದು ಹೇಳಿ ನೀರೊಳಗೆ ಕೈ ಹಾಕಿದಳು. ಕೂಡಲೇ ನೀರಿನಿಂದ ಬೆಂಕಿಯ ಜ್ವಾಲೆ ಎದ್ದು ಅವಳ ಕೈಯನ್ನು ಸುಟ್ಟುಹಾಕಿತು. ಅವಳು ಕಿರಿಚುತ್ತ ಅಲ್ಲಿಂದ ಓಡಿಹೋದಳು.

ದೊರೆ ನಾಚಿಕೆಯಿಂದಲೂ ಅವಮಾನದಿಂದಲೂ ತಲೆ ತಗ್ಗಿಸಿದ; ತಾನು ಶಾಪಕ್ಕೆ ಒಳಗಾಗಬಹುದು ಎನ್ನುವ ಭೀತಿಯಿಂದ ನಡುಗಿದ. ಆದರೆ ವೇದಶರ್ಮ ಅವನನ್ನು ಕ್ಷಮಿಸಿ, ಬುದ್ಧಿ ಹೇಳಿದ.

# ಚಿತ್ರಕಲಾ ನಿಪುಣನ ಕತೆ

ಹಿಂದೆ ಶಶಿ ಮತ್ತು ಮೂಲದೇವ ಎಂಬ ಇಬ್ಬರು ಸ್ನೇಹಿತರಿದ್ದರು. ಇಬ್ಬರೂ ಚಿತ್ರಕಲೆ, ಮಾಯಾಮಂತ್ರ, ನಟನಾ ಚಾತುರ್ಯಗಳಲ್ಲಿ ನಿಷ್ಣಾತ ರಾಗಿದ್ದರು. ದೇಶ ವಿದೇಶಗಳಲ್ಲಿ ತಮ್ಮ ಕೌಶಲ್ಯವನ್ನು ಮೆರೆಸಬೇಕೆಂಬ ಉದ್ದೇಶದಿಂದ ಇಬ್ಬರು ಸ್ನೇಹಿತರೂ ದೇಶ ಪರ್ಯಟನ ಕೈಕೊಂಡು, ಒಮ್ಮೆ ಕೌಸಾಲಾಪುರಿ ಎನ್ನುವ ಊರು ತಲುಪಿದರು. ಒಂದು ದಿನ ಅವರು ಆ ಊರಿನ ಯೋಗಿನಿ ದೇವಾಲಯದ ಬಳಿ ನಿಂತಿದ್ದಾಗ, ಪೂಜೆ ಮುಗಿಸಿಕೊಂಡು ಹೊರಗೆ ಬರುತ್ತಿದ್ದ ಕೌಮುದಿ ಎಂಬ ರಾಜಕುಮಾರಿಯನ್ನು ಕಂಡರು. ಅಪೂರ್ವ ಸುಂದರಿಯೂ, ನವ ಯೌವನವತಿಯೂ ಆದ ಆಕೆಯನ್ನು ನೋಡಿದ ಕೂಡಲೇ ಮೂಲದೇವನು ಅವಳಿಗೆ ತನ್ನ ಹೃದಯವನ್ನು ಧಾರೆ ಎರೆದು, ಮದನ ತಾಪದಿಂದ ಅಲ್ಲಿಯೇ ಮೂರ್ಛೆ ಹೋಗಿಬಿಟ್ಟ. ಶಶಿ ಇದನ್ನು ಕಂಡು ಮರುಕದಿಂದ, "ಛೇ, ಸ್ನೇಹಿತನ ದುಃಖ ಸಂತೋಷಗಳನ್ನು ಸಮಾನವಾಗಿ ಹಂಚಿಕೊಳ್ಳದವನು ಎಂಥ ಸ್ನೇಹಿತ? ಈ ಮೂಲದೇವ ಉಳಿಯುತ್ತಾನೋ, ಇಲ್ಲವೋ ತಿಳಿಯದು. ಆದರೆ ನಾನು ಸಾಧ್ಯವಿದ್ದದ್ದನ್ನೆಲ್ಲ ಮಾಡಿ, ಅವನು ಬಯಸಿದ್ದು ಅವನಿಗೆ ದೊರೆಯುವಂತೆ ಮಾಡಬೇಕು," ಎಂದ ನಿಶ್ಚಯಿಸಿದ.

ಹಾಗೆ ನಿಶ್ಚಯಿಸಿ, ಸ್ನೇಹಿತನನ್ನು ಸಮಾಧಾನ ಮಾಡುತ್ತಿರುವಾಗ ದೇವಸ್ಥಾನದ ಬಳಿ ಇದ್ದ ಹೂವಾಡಿಗಿತ್ತಿ ಅವನ ಕಣ್ಣಿಗೆ ಬಿದ್ದಳು. ಅವನು ಆಕೆಯ ಬಳಿ ಹೋಗಿ ರಾಜಕುಮಾರಿಯ ಬಗ್ಗೆ ವಿಚಾರಿಸಿದ. ಆಕೆ ಇವರ ಬಗ್ಗೆ ವಿಚಾರಿಸಿ ನಂತರ, "ನೀವು ನೋಡಿದ್ದು ನಮ್ಮ ರಾಜನ ಮಗಳು. ಅವಳಿಗೆ ಅನುರೂಪ ನಾದ ವರನನ್ನು ಆಕೆಯ ತಂದೆ ಆರಿಸಿದ್ದಾನೆ. ಆದರೆ ಇವಳು ತಾನು ಮದುವೆಯಾಗುವುದೇ ಇಲ್ಲ ಎಂದು ಹಟಹಿಡಿದು ಈ ಯೋಗಿನಿ ದೇವತೆಯ ಪೂಜೆ ಮಾಡುತ್ತ, ಧ್ಯಾನ, ಪೂಜೆಗಳಲ್ಲಿ ಕಾಲ ಕಳೆಯುತ್ತಿದ್ದಾಳೆ. ಇವಳ ವರ್ತನೆ ಯಾರಿಗೂ ಅರ್ಥವಾಗಿಲ್ಲ," ಎಂದಳು. ಶಶಿ ಅವಳ ಮಾತು ಕೇಳಿ, "ಹಾಗಾದರೆ ನೀನು ನನಗೊಂದು ಉಪಕಾರ ಮಾಡು. ನಾನು ವೇಷ ಮರೆಸಿಕೊಳ್ಳುವುದರಲ್ಲಿ ನಿಷ್ಣಾತ. ನನ್ನನ್ನು ರಾಣಿಯ ಊಳಿಗಕ್ಕೆ ಸೇರಿಸು," ಎಂದ. ನಂತರ ಮೂಲದೇವನನ್ನೂ, ಹೂವಾಡಿಗಿತ್ತಿಯ ಮನೆಯಲ್ಲಿ ಇರಿಸಿ, ತಾನು ಶಶಿಲೇಖಾ ಎನ್ನುವ ಹೆಸರಿನಲ್ಲಿ ಕೌಮುದಿಯ ಊಳಿಗವನ್ನು ಸೇರಿಕೊಂಡ.

ಅಸ್ವಲ್ಪ ಕಾಲದಲ್ಲೇ ಶಶಿಲೇಖೆ ಮತ್ತು ಕೌಮುದಿ ತುಂಬ ಹತ್ತಿರದ ಗೆಳತಿಯರಾದರು. ಒಬ್ಬರನ್ನೊಬ್ಬರು ಬಿಟ್ಟಿರುತ್ತಲೇ ಇರಲಿಲ್ಲ ಹೀಗೆ ಅವರ ಸ್ನೇಹ ನಿಕಟವಾದ ಮೇಲೆ ಒಂದು ದಿನ ಶಶಿಲೇಖೆ, "ಗೆಳತಿ, ನೀನು ಅಪೂರ್ವ ಸುಂದರಿ. ಯೌವನವತಿ ಆದರೆ ನಿನಗೆ ಈ ಪ್ರಪಂಚದ ಸುಖ ಯಾಕೆ ಬೇಕಿಲ್ಲ? ಗಂಡಸರನ್ನು ಕಂಡರೆ ನಿನಗೇಕೆ ಇಷ್ಟು ತಿರಸ್ಕಾರ?" ಎಂದು ಕೇಳಿದಳು. ಕೌಮುದಿ, "ಗೆಳತಿ, ನೀನು ಈ ವಿಷಯದಲ್ಲಿ ನನ್ನನ್ನು ಪ್ರಶ್ನಿಸಕೂಡದು" ಎಂದಾಗ ಶಶಿಲೇಖಾ, "ನಾನೂ ನಿನ್ನನ್ನು ಕೇಳಕೂಡದೇ? ಹಾಗಿದ್ದಲ್ಲಿ ನಮ್ಮ ಸ್ನೇಹಕ್ಕೇನು ಅರ್ಥ, ಹೇಳು," ಎಂದಳು. ಕೌಮುದಿ ಏನೂ ಹೇಳದೆ ಸುಮ್ಮನಿದ್ದಾಗ ಆಕೆ ಮತ್ತೆ, "ಹೇಳು. ಮದುವೆಯಾಗದೇ ಇರುವುದಕ್ಕೆ ಏನು ಕಾರಣ? ನೀನು ಹೇಳಿದರೆ ಬಹುಶಃ ನಾನು ಅದರ ನಿವಾರಣೆಗೆ ಯತ್ನಿಸಬಹುದು," ಎಂದು ಒತ್ತಾಯ ಮಾಡಿದಳು.

ಆಗ ಕೌಮುದಿ, "ಶಶಿಲೇಖಾ, ನೀನು ನನಗೆ ಆಪ್ತಳು ನನ್ನ ಎರಡನೆಯ ಹೃದಯ ಎನ್ನುವಂತಿದ್ದೀ ಆದ್ದರಿಂದ ನಿನ್ನಲ್ಲಿ ಯಾಕೆ ಹೇಳಬಾರದು? ನಾನು ಯಾವ ಪುರುಷನನ್ನೂ ಯಾಕೆ ಒಪ್ಪುವುದಿಲ್ಲ ಎಂದರೆ ನನಗೆ ನನ್ನ ಪೂರ್ವ ಜನ್ಮದ ಎಲ್ಲ ವಿವರಗಳೂ ನೆನಪಿನಲ್ಲಿವೆ ಆಗ ನಾನು ಹರಿಣಿಯ ರೂಪದಲ್ಲಿದ್ದೆ ಒಳ್ಳೆಯ ಹಸಿರು ಹುಲ್ಲಿನ ಬಯಲಿನಲ್ಲಿ ನನ್ನ ಗಂಡನ ಜೊತೆ ಸುಖವಾಗಿದ್ದೆ ಅವನಿಗೆ ಸುಂದರವಾದ ಕೊಂಬುಗಳಿದ್ದುವು. ಮೈಮೇಲೆ ನಕ್ಷತ್ರದಂಥ ಚುಕ್ಕೆಗಳಿದ್ದುವು. ಹೀಗೆ ನಾವು ಸುಖವಾಗಿದ್ದಾಗ ಒಂದು ದಿನ ಬೇಟೆಗಾರರ ಗುಂಪೊಂದು ಬಂದು ನಾವಿದ್ದ ಬಯಲನ್ನು ಸುತ್ತುಗಟ್ಟಿತು. ನಾನಾಗ ಬಸುರಿ. ನನ್ನ ಹೊಟ್ಟೆಯಲ್ಲಿ ಒಂದು ಮರಿ ಇತ್ತು. ವೇಗವಾಗಿ ಚಲಿಸಲಾರದ ಸ್ಥಿತಿಯಲ್ಲಿ ನಾನಿದ್ದೆ ಬೇಟೆಗಾರರು ಹತ್ತಿರ ಬರುತ್ತಿರುವುದನ್ನು ನೋಡಿ ನಾನು ನನ್ನ ಗಂಡನಿಗೆ ಹೇಳಿದೆ: 'ನನ್ನ ಗತಿ ಮುಗಿಯಿತು. ನೀನೂ ಸಾಯುವುದು ಬೇಡ ಬೇಗ ಜಿಗಿದು ನೀನು ತಪ್ಪಿಸಿಕೊ'. ಎಷ್ಟು ಬೇಡಿಕೊಂಡರೂ ಅವನು ನನ್ನ ಮೇಲಿನ ಪ್ರೀತಿಯಿಂದ ನನ್ನ ಪಕ್ಕದಲ್ಲೇ ಉಳಿದ. ಬೇಟೆಗಾರರ ಬಾಣಗಳು ಅವನ ಹೃದಯವನ್ನು ಹೊಕ್ಕು ಅವನನ್ನು ಕೆಳಕ್ಕೆ ಕೆಡವಿದವು. ನನಗೆ ಬಾಣಗಳೇನೂ ತಾಕಲಿಲ್ಲ. ಆದರೆ ನನ್ನ ಪ್ರಿಯತಮನು ಸತ್ತದ್ದು ನೋಡಿ ನಾನೂ ಬಿದ್ದು ಪ್ರಾಣತ್ಯಾಗ ಮಾಡಿದೆ. ಸಾಯುವ ಮೊದಲು ಅವನು ನನ್ನತ್ತ ನೋಡಿ, 'ಪ್ರಿಯೆ, ನಿಜವಾಗಿ ಪ್ರೀತಿಸುವ ದಂಪತಿಗಳು ಶಿವ–ಪಾರ್ವತಿಯರು ಇದ್ದಂತೆ. ಸತ್ತ ನಂತರವೂ ಅವರ ಪ್ರೀತಿ ಅವರನ್ನು ಶಾಶ್ವತವಾಗಿ ಬಂಧಿಸಿರುತ್ತದೆ. ಅವರಿಗೆ ಅಗಲಿಕೆಯೇ ಇಲ್ಲ' ಎಂದು ಹೇಳಿ ಸತ್ತುಹೋದ.

"ಪೂರ್ವಜನ್ಮದ ಪುಣ್ಯವೋ ಏನೋ ನನಗೀಗ ಮನುಷ್ಯ ಜನ್ಮ ಬಂದಿದೆ. ರಾಜಕುಮಾರಿಯಾಗಿದ್ದೇನೆ. ಆದರೆ ನನ್ನ ಪೂರ್ವಜನ್ಮದ ಗಂಡನನ್ನು ಮರೆಯಲಾರೆ. ಹಾಗಾಗಿ ಮದುವೆಗೆ ಒಪ್ಪುತ್ತಿಲ್ಲ" ಎಂದಳು.

ಆಗ ಶಶಿಲೇಖ, "ರಾಜಕುಮಾರಿ ಈಗ ಆತನೆಲ್ಲಿದ್ದಾನೆ? ಅದು ನಿನಗೆ ತಿಳಿಯದೇ?" ಎಂದು ಕೇಳಿದಾಗ, "ನನಗೆ ಪೂರ್ವಜನ್ಮದ ನೆನಪು ಮಾತ್ರ ಉಳಿದಿದೆ; ಆದರೆ ಅವನೀಗ ಯಾವ ರೂಪಿನಲ್ಲಿ ಎಲ್ಲಿದ್ದಾನೋ? ನಾನು ಅವನನ್ನು ಹೇಗೆ ಗುರುತು ಹಿಡಿಯಬಲ್ಲೆ?" ಎಂದು ನಿಟ್ಟುಸಿರು ಬಿಟ್ಟಳು.

ಈ ಸಂಗತಿ ಎಲ್ಲವನ್ನೂ ಶಶಿ ರಹಸ್ಯವಾಗಿ ಬಂದು ಮೂಲದೇವನಿಗೆ ತಿಳಿಸಿದ.

ಮೂಲದೇವ ನಿಷ್ಣಾತ ಚಿತ್ರಕಾರನಾದ್ದರಿಂದ ಅವನು ಕೂಡಲೇ ಕೌಮುದಿ ಹೇಳಿದಂಥ ಎಲ್ಲ ವಿವರಗಳೂ ಇರುವ ಚಿತ್ರವೊಂದನ್ನು ರಚಿಸಿದ. ಅದರ ಒಂದು ಬದಿಯಲ್ಲಿ ತನ್ನ ಹಾಗೂ ಕೌಮುದಿಯ ಚಿತ್ರವನ್ನೂ ಸೇರಿಸಿದ. ನಂತರ, ಚಿತ್ರಪಟದೊಂದಿಗೆ ಅರಮನೆಗೆ ಹೋಗಿ, ಅದನ್ನು ಕೌಮುದಿಗೆ ಕಾಣಿಕೆ ಎಂದು ನೀಡಿದ ಚಿತ್ರವನ್ನು ನೋಡಿದ ಕೂಡಲೇ ಕೌಮುದಿಯ ಕಣ್ಣುಗಳಿಂದ ದಳದಳನೆ ನೀರು ಸುರಿಯಿತು ಶಶಿಲೇಖ ಕೋಪವನ್ನು ನಟಿಸುತ್ತ, "ಅಯ್ಯೋ, ಹಾಳು ಚಿತ್ರಗಾರನೇ, ನನ್ನ ಒಡತಿ ಅಳುವ ಹಾಗೆ ಮಾಡಿದೆಯಲ್ಲ, ನಿನ್ನ ಕೆಟ್ಟ ಚಿತ್ರವನ್ನು ತೆಗೆದುಕೊಂಡು ಹೋಗು," ಎಂದಳು. ಕೂಡಲೇ ಕೌಮುದಿ, "ಸಖಿ, ಹಾಗೆನ್ನಬೇಡ ಇದು ಕೆಟ್ಟ ಚಿತ್ರವಲ್ಲ. ಇದು ನನ್ನ ಭಾಗ್ಯ. ಇವನೇ ನನ್ನ ಪೂರ್ವಜನ್ಮದ ಪತಿ" ಎಂದಳು. "ಇವನೇ ಎಂದು ನಿನಗೆ ಹೇಗೆ ಗೊತ್ತು?" ಎಂದು ಕೇಳಿದಾಗ, "ಆ ಚಿತ್ರವೇ ನನಗಿದನ್ನು ಹೇಳುತ್ತದೆ," ಎಂದು ಮುಗುಳ್ನಕ್ಕಳು. ಶಶಿಲೇಖ ಅಲ್ಲಿಗೂ ಸುಮ್ಮನಾಗದೇ, "ಯಾರು ಬೇಕಾದರೂ ಮೋಸ ಮಾಡುವಂಥ ಚಿತ್ರ ಬಿಡಿಸಬಲ್ಲರು," ಎಂದಾಗ, "ಸಖಿ, ನಿನಗಲ್ಲದೆ ನಾನು ಬೇರೆ ಯಾರಿಗೂ ನನ್ನ ಪೂರ್ವಜನ್ಮದ ರಹಸ್ಯ ತಿಳಿಸಿಲ್ಲ ನೀನೂ ಅದನ್ನು ಯಾರಿಗೂ ಹೇಳಿಲ್ಲ ಎಂದು ನನಗೆ ಗೊತ್ತು. ಹಾಗಿದ್ದ ಮೇಲೆ, ಇದಕ್ಕಿಂತ ಹೆಚ್ಚಿನ ಸಮರ್ಥನೆ ಏನು ಬೇಕು?" ಎಂದಳು. ಶಶಿಲೇಖೆ ಅವಳ ಮಾತನ್ನು ಒಪ್ಪಿದಂತೆ ತಲೆದೂಗಿದಳು. ಸ್ವಲ್ಪ ಸಮಯದ ನಂತರ ಮೂಲದೇವ ಹಾಗೂ ಕೌಮುದಿಯರ ವಿವಾಹವೂ ಆಯಿತು. ಹೀಗೆ, ತಾನು ಕಲಿತ ಕಲೆಯ ಮೂಲಕ ಮೂಲದೇವ ತನಗೆ ಬೇಕಾದದ್ದನ್ನು ಪಡೆದುಕೊಂಡ.

# ಸಂಗೀತ ಶಾಸ್ತ್ರಜ್ಞನ ಕತೆ

ಯಾರು ತನ್ನ ಗಾನಸಿದ್ಧಿಯಿಂದ ಜೀವಿಗಳಿಗೆ ಸಂತೋಷ ಉಂಟು ಮಾಡಬಲ್ಲನೋ ಯಾರು ತನ್ನ ಕಂಠಶ್ರೀಯಿಂದ ಕೀರ್ತಿಭಾಜನನಾಗುತ್ತಾನೋ ಅವನೇ ಸಂಗೀತ ಕಲಾನಿಪುಣ.

ಗೋರಕ್ಷಪುರ ಎನ್ನುವ ಪಟ್ಟಣದಲ್ಲಿ ಉದಯಸಿಂಹ ಎನ್ನುವ ಅರಸನೊಬ್ಬನಿದ್ದ. ಅವನು ಗುಣಗ್ರಾಹಿ; ತಾರತಮ್ಯ ವಿವೇಕ ಉಳ್ಳವನು. ಹೀಗಾಗಿ ಅನೇಕ ಕಲಾವಿದರು ಅವನ ಆಸ್ಥಾನಕ್ಕೆ ಬರುತ್ತಿದ್ದರು. ಒಂದು ದಿನ ತಿರಭುಕ್ತಿ ದೇಶದಿಂದ ಕಲಾನಿಧಿ ಎನ್ನುವ ಗಾಯಕ ಅವನ ಆಸ್ಥಾನಕ್ಕೆ ಬಂದ. ದೊರೆ ಆಗ ಪೂಜೆಯಲ್ಲಿದ್ದ. ಕಲಾನಿಧಿ ದೇವರ ಸ್ತೋತ್ರಗಳನ್ನು ಹಾಡಲು ಪ್ರಾರಂಭಿಸಿದ. ಅವನು ಎಷ್ಟು ಚೆನ್ನಾಗಿ ಹಾಡಿದನೆಂದರೆ ದೊರೆ ಸಂತೋಷ ದಿಂದ ಉಬ್ಬಿಹೋಗಿ ಆ ಕ್ಷಣದಲ್ಲೇ ಅವನಿಗೆ ಮರ್ಯಾದೆ ಮಾಡಿ ಅನೇಕ ವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಇತ್ತ.

ಇದನ್ನು ನೋಡಿದ ಸ್ಥಳೀಯ ಗಾಯಕರು ಕೋಪದಿಂದಲೂ ಮತ್ಸರ ದಿಂದಲೂ, "ಪ್ರಭೂ, ಈ ಪರದೇಶಿ ಬರಿಯ ಕಲಾನಿಧಿ ಅಷ್ಟೆ; ನಿಜವಾಗಿ ಅವನು ಕಲೆಯ ಸಣ್ಣ ಭಾಗ ಅಷ್ಟೆ. ಅವನಿಗೆ ಗಾಯನ ಕಲೆಯೇ ತಿಳಿಯದು. ಅವನನ್ನು ನೀವೇಕೆ ಹೀಗೆ ಆದರಿಸಿ, ಸತ್ಕಾರ ಮಾಡುತ್ತಿದ್ದೀರಿ?" ಎಂದು ಕೇಳಿದರು.

ದೊರೆ, "ಅಯ್ಯಾ, ಆತನ ಕಂಠಮಾಧುರ್ಯ ನನ್ನ ಮನಸ್ಸಿನಲ್ಲಿ ಅಮೃತ ಸೇಚನ ಮಾಡಿತು; ನನ್ನನ್ನು ನಿಜವಾಗಿ ಕೊಚ್ಚಿಕೊಂಡು ಹೋಯಿತು. ನೀವು ಹೇಳುವ ಅಭಿಪ್ರಾಯ ನನ್ನ ಅನುಭವಕ್ಕೆ ತದ್ವಿರುದ್ಧವಾಗಿದೆಯಲ್ಲ?" ಎಂದ.

"ಹಾಗಾದರೆ, ಪ್ರಭುಗಳು ತುಂಬು ಸಭೆಯಲ್ಲಿ ಗಾನಕಲೆಯಲ್ಲಿ ಅವನು ಹೆಚ್ಚೋ, ನಾವು ಹೆಚ್ಚೋ ಎನ್ನುವುದನ್ನು ಪರೀಕ್ಷೆ ಮಾಡಬೇಕು."

ದೊರೆ, ಕಲಾನಿಧಿಯತ್ತ ತಿರುಗಿ, "ಇದಕ್ಕೆ ನಿನ್ನ ಉತ್ತರವೇನು?" ಎಂದು ಕೇಳಿದ.

"ಪ್ರಭೂ, ನಾನು ಉತ್ತರ ಕೊಡುವುದು ಈ ಸಂದರ್ಭದಲ್ಲಿ ಉಚಿತವಲ್ಲ; ಗಾನಕ್ಕೆ ಇದು ಸರಿಯಾದ ಸಮಯವೂ ಅಲ್ಲ. ಏಕೆಂದರೆ, ನಾನು ಹಾಡಿದ್ದು ಹರಸಿಂಹದೇವ ನನ್ನ ಶ್ರೋತೃವಾಗಿದ್ದಾಗ; ವಸಂತಕಾಲದಲ್ಲಿ ಮಾತ್ರ ಕೋಗಿಲೆ

ಪಂಚಮದಲ್ಲಿ ಹಾಡುತ್ತದೆ, ವಸಂತ ಕಳೆದು ಹೋದ ಮೇಲಲ್ಲ. ಮತ್ತೆ, ದೇವ ವಾಕ್ಯದ ಪ್ರಕಾರ ಗಾನಕಲೆಯಲ್ಲಿ ನಿಷ್ಣಾತನಾದವನು ಒಬ್ಬನೇ ಒಬ್ಬ ಈ ಪ್ರಪಂಚದಲ್ಲಿದ್ದಾನೆ. ಆ ಅವನು ನಾನೇ. ನಾನೊಬ್ಬನೇ ನನ್ನ ಗಾನಾಮೃತದಿಂದ ಶ್ರೋತೃಗಳ ಮನಸ್ಸಂತೋಷಗೊಳಿಸಬಲ್ಲೆ."

"ಪ್ರಭೂ, ನೀವೇ ನೋಡಿ, ಈ ಮನುಷ್ಯನ ಅಹಂಕಾರ ಎಂಥದು ಎನ್ನುವುದು."

ಆಗ ಕಲಾನಿಧಿ, "ಇದು ಅಹಂಕಾರವಲ್ಲ ಸರಳವಾದ ಸತ್ಯ. ಆಗಲಿ, ನಾನು ಹಾಡುತ್ತೇನೆ. ಇವರೂ ಹಾಡಲಿ. ಆದರೆ ತೀರ್ಪುಗಾರರು ಯಾರು? ತೀರ್ಪುಗಾರರಾಗಲು ಇಬ್ಬರು ಯೋಗ್ಯರಿದ್ದರು. ಒಬ್ಬ ಪರಶಿವ; ಇನ್ನೊಬ್ಬ ಹರಸಿಂಹದೇವ. ಹರಸಿಂಹದೇವ ಈಗಿಲ್ಲ. ಆದ್ದರಿಂದ ಆ ಪರಶಿವನೇ ತೀರ್ಪುಗಾರನಾದರೆ ನಾನೀ ಪಂಥಕ್ಕೆ ಒಪ್ಪುತ್ತೇನೆ."

"ಪ್ರಭೂ, ಈತ ಸೋತಂತೆಯೇ ಸರಿ ಶಿವ ಎಲ್ಲಾದರೂ ಕಾಣಿಸಿಕೊಂಡು ತೀರ್ಪುಗಾರನಾಗುವುದು ಉಂಟೇ? ಇದು ಬರೀ ನುಣುಚಿಕೊಳ್ಳುವ ಯತ್ನ, ಅಷ್ಟೆ."

"ಸರಿ. ನೀವು ಒಪ್ಪಿದ ತೀರ್ಪುಗಾರನ ಮುಂದೆಯೇ ನಾನು ಹಾಡುತ್ತೇನೆ."

"ನಮ್ಮವರು ತೀರ್ಪುಗಾರರಾದರೆ ಅವರು ನಮ್ಮ ಪರವಾಗಿರಬಹುದು ಎನ್ನುವ ಅನುಮಾನ ಮೂಡುತ್ತದೆ. ಆದ್ದರಿಂದ ಜಿಂಕೆಗಳನ್ನು ತೀರ್ಪುಗಾರರಾಗಿ ಆರಿಸೋಣ."

"ಜಿಂಕೆಗಳು ತಮ್ಮ ರುಚಿಯಲ್ಲಿ ಸ್ವಲ್ಪ ಸ್ವೇಚ್ಛಾಚಾರಿಗಳು. ಅವು ಎಂಥ ಹಾಡಿಗೂ ತಲೆದೂಗುತ್ತವೆ. ಪ್ರಾಣಿಗಳೇ ತೀರ್ಪುಗಾರರಾಗಬೇಕಿದ್ದಲ್ಲಿ ಹಸುಗಳು ತೀರ್ಪುಗಾರರಾಗಲಿ."

ಇಬ್ಬರೂ ಇದಕ್ಕೆ ಒಪ್ಪಿದರು. ದೊರೆಗೂ ಕುತೂಹಲ ಹೆಚ್ಚಿತು. ಪಂಥದ ನಿಯಮ ಹೀಗಿತ್ತು. ಬಾಯಾರಿ, ನೀರು ಕುಡಿಯಲು ಹೋಗುತ್ತಿರುವ ಗೋವುಗಳ ಮುಂದೆ ಗಾಯನ ನಡೆಯಬೇಕು. ಯಾರ ಗಾಯನ ಕೇಳಿ ತುರುಮಂದೆ ನೀರು ಕುಡಿಯದೇ ವಾಪಸ್ಸು ಬರುತ್ತವೋ ಅವನು ಗೆದ್ದಂತೆ.

ಈ ಪಂಥದಲ್ಲೂ ಕಲಾನಿಧಿಯೇ ವಿಜಯಿಯಾದ. ಮೃಗಗಳನ್ನೂ ಸಂತೋಷಗೊಳಿಸಬಲ್ಲ ಗಾನಕಲೆ ತಿಳಿದವರನ್ನು ಇನ್ನೆಷ್ಟು ಸಂತೋಷದಿಂದ ತುಂಬಿಸಬಲ್ಲುದು!

# ಅಭಿನಯ ಚತುರನ ಕತೆ

ಮಂಗಳಕರನಾದ ಶಿವನೇ ಗಾನ, ಅಭಿನಯ, ಕಾವ್ಯ, ವಾದ್ಯಗಳಿಂದ ಹೊಮ್ಮುವ ಭಾವಗಳ ಇಷ್ಟದೇವತೆ; ಸತ್ಯವಾಗಿ ಅವನೇ ಅವುಗಳಲ್ಲಿ ಆನಂದ ಪಡುತ್ತಾನೆ.

ಭರತ ಹೇಳಿರುವ ಹಾಗೆ,

"ಮೊದಲು ಇಂದ್ರ ಬ್ರಹ್ಮನನ್ನು ಪ್ರಾರ್ಥಿಸಿದ. ಆಗ ಬ್ರಹ್ಮ ನಾಲ್ಕು ವೇದಗಳ ಸಾರವನ್ನು ತೆಗೆದು, ಆ ಸಾರದಿಂದ ಐದನೆಯ ವೇದವಾದ ನಾಟ್ಯವೇದವನ್ನು ಸೃಷ್ಟಿಸಿದ.

ಋಗ್ವೇದದಿಂದ ಅರ್ಥವನ್ನೂ, ಸಾಮದಿಂದ ಸಂಗೀತವನ್ನೂ, ಯಜುರ್ವೇದದಿಂದ ಮುದ್ರೆಗಳನ್ನೂ, ಅಥರ್ವವೇದದಿಂದ ಭಾವಾಭಿನಯ ವನ್ನೂ ತೆಗೆದುಕೊಂಡು ಈ ವೇದವನ್ನು ಸೃಷ್ಟಿಸಿದ ಮತ್ತೆ ಭರತನ ಪ್ರಕಾರ, ಅಭಿನಯ ಎರಡು ಬಗೆಯದು:

ಸ್ತ್ರೀಯ ಅಭಿನಯ ಲಾಸ್ಯ; ಪುರುಷ ಅಭಿನಯ ತಾಂಡವ ಮೊದಲಿನದು ಗೌರಿಯನ್ನೂ, ಎರಡನೆಯದು ಮಹೇಶ್ವರನನ್ನೂ ಮುದಗೊಳಿಸುತ್ತದೆ.

ಹಾಗೆಯೇ,

ನಾಟ್ಯಕಲೆಯಲ್ಲಿ ಇಲ್ಲದ ವಿಜ್ಞಾನ, ತಂತ್ರ, ಜ್ಞಾನ, ಕಲೆ, ತತ್ವಬೋಧೆ, ಪರಮಾತ್ಮ ದರ್ಶನ ಬೇರೆ ಇನ್ನೆಲ್ಲೂ ಇಲ್ಲ."

ಭರತನೇ ಹೇಳಿರುವಂತೆ:

"ಶ್ರೀಮಂತರಿಗೆ ಇದು ವಿನೋದ; ಸಂತೋಷಿಗಳಿಗೆ ಸ್ವ–ನಿಯಂತ್ರತೆ; ಅವಿವೇಕಿಗಳಿಗೆ ಎಚ್ಚರ; ಮುನಿಗಳಿಗೆ ಅಶಾಶ್ವತೆಯ ದರ್ಶನ; ಕಾವ್ಯಪ್ರಿಯರಿಗೆ ಹರ್ಷ; ಇದು ಪ್ರಪಂಚಕ್ಕೆ ಉಪಕಾರ ರೂಪದ್ದು."

ಹಿಂದೆ ಬಂಗಾಳದಲ್ಲಿ ಲಕ್ಷ್ಮಣಸೇನ ಎನ್ನುವ ಒಬ್ಬ ದೊರೆ ಇದ್ದ. ಉಮಾಪತಿಧರ ಅವನ ಅಮಾತ್ಯ. ದೊರೆಯ ಆಸ್ಥಾನದಲ್ಲಿ ಗಂಧರ್ವ ಎಂಬ ಒಬ್ಬ ನಟನಿದ್ದ.

ಒಂದು ಸಾರಿ, ಸ್ನಾನಾನಂತರ, ರಾಜಸಭೆಗೆ ಹೋಗಬೇಕಿದ್ದ ಗಂಧರ್ವ ತನ್ನ ಹಣೆಯ ಮೇಲೆ ಒಂದು ಗಂಧದ ಬೊಟ್ಟು ಇಟ್ಟುಕೊಂಡಿದ್ದ. ಇದನ್ನು ನೋಡಿದ ಅಮಾತ್ಯ, "ಅಯ್ಯಾ ಗಂಧರ್ವ, ನಿನ್ನ ಹಣೆಯ ಮೇಲೆ ಒಂದೇ ಬೊಟ್ಟಿದೆ. ನೀನೇನು ನಪುಂಸಕ ಲಿಂಗವೋ" ಎಂದು ತಮಾಷೆ ಮಾಡಿದ. ಗಂಧರ್ವ, "ಅಮಾತ್ಯರೇ, ಸರಿಯಾಗಿ ನೋಡಿ. ನನ್ನ ಕಂಠದಲ್ಲಿ ಇನ್ನೊಂದು ಬೊಟ್ಟಿದೆ. ಅಂದರೆ, ಒಂದು ಬೊಟ್ಟಿನ ಕೆಳಗೆ ಇನ್ನೊಂದು ಇದ್ದರೆ ಅದು ಅನುಸ್ವಾರವಲ್ಲ. ವಿಸರ್ಗ ಆದ್ದರಿಂದ ಪುಲ್ಲಿಂಗ," ಎಂದ

ದೊರೆ ನಸುನಗೆ ನಕ್ಕ ಅಮಾತ್ಯನಿಗೆ ಸಿಟ್ಟು ಬಂತು:

"ಅಯ್ಯೋ, ದುಷ್ಟ ನಟ, ಅನ್ನಕ್ಕಾಗಿ ಊರಿಂದ ಊರು ತಿರುಗುವವನೇ! ನಮ್ಮೊಡನೆ ಶಬ್ದಾರ್ಥಕ್ಕೆ ಇಳಿಯುತ್ತೀಯಾ? ನಾನು ಉಮಾಪತಿಧರ ಎಂದರೆ ನಾನು ಎತ್ತು ಎಂದು ನಿನ್ನರ್ಥವೋ?" ಎಂದು ಕೂಗಿದ

ಗಂಧರ್ವ, "ಸ್ವಾಮಿ, ನೀವು ಆಡಿದ್ದಕ್ಕೆ ನಾನು ಪ್ರತಿಯಾಗಿ ಆಡಿದೆನಷ್ಟೆ. ನಾನು ಒಬ್ಬ ನಟ ಮಾತ್ರ ನನ್ನ ಕಲೆಯನ್ನು ತಿಳಿದವನು ಅಷ್ಟೆ."

"ಹಾಗೋ, ನೀನು ನಿನ್ನ ಕಲೆಯನ್ನು ಬಲ್ಲವನೋ? ಸರಿ ಭವಭೂತಿಯ ಉತ್ತರರಾಮ ಚರಿತ್ರೆಯಲ್ಲಿನ ರಾಮ–ಸೀತೆಯರ ಸ್ಪರ್ಶ ಪ್ರಸಂಗವನ್ನು ಮಾಡಿ ತೋರಿಸು," ಎಂದ

ನಟ ಒಪ್ಪಿದ. ದೊರೆ ರಂಗವನ್ನೂ, ಇತರ ಪರಿಕರಗಳನ್ನೂ ಸಿದ್ಧಪಡಿಸಲು ಪರಿವಾರಕ್ಕೆ ಸೂಚಿಸಿದ ಎಲ್ಲ ಸಿದ್ಧವಾದ ನಂತರ, ಗಂಧರ್ವ ರಾಮನ ಪಾತ್ರವನ್ನು ಧರಿಸಿ, ರಾಮ ಸೀತೆಯನ್ನು ಮುಟ್ಟಲು ಹೋಗಿ, ಅದಾಗದೇ ನಿರಾಶೆಯಿಂದ ಮೂರ್ಛೆ ಹೋಗುವುದನ್ನು ಅಭಿನಯಿಸಿದ.

ಅವನು ಅಭಿನಯದಲ್ಲೇ ಮೈಮರೆತು, 'ಇದೇ ಉಪವನ, ಇದೇ ವೃಕ್ಷ ಸೀತೆ ನನ್ನ ಹೃದಯವನ್ನು ಮುಟ್ಟಿದಳು; ನಾನೇ ರಾಮ, ಹೌದು ನಾನು ರಾಮನೇ' ಎಂದು ಹೇಳುತ್ತ ರಾಮನ ಶೋಕವನ್ನು ಎಷ್ಟು ಗಾಢವಾಗಿ ಅನುಭವಿಸಿ ತೋರಿಸಿದ ಎಂದರೆ, ಅಭಿನಯ ಮುಗಿದ ಮೇಲೆ ಅವನು ಏಳಲೇ ಇಲ್ಲ. ಅದೇ ಕ್ಷಣದಲ್ಲೇ ಅವನು ವಿಷ್ಣುವಿನಲ್ಲಿ ಐಕ್ಯನಾಗಿದ್ದ.

# ಐಂದ್ರಜಾಲಿಕನ ಕತೆ

ಅಸ್ತಿತ್ವ ಇರದ ವಸ್ತುವನ್ನು ಅಸ್ತಿತ್ವವಿರುವಂತೆ ತೋರಿಸುವ ವಿದ್ಯೆಯನ್ನು ಇಂದ್ರಜಾಲ ವಿದ್ಯೆ ಎನ್ನುತ್ತಾರೆ; ಇದರಲ್ಲಿ ನಿಪುಣನಾದವನು ಐಂದ್ರಜಾಲಿಕ.

ಸಿಂಬಲಿ ಅರಣ್ಯದಲ್ಲಿ ಪಕ್ಷಧಾರಾಮಿಶ್ರ ಎನ್ನುವ ಬ್ರಾಹ್ಮಣ ಪಂಡಿತನೊಬ್ಬನಿದ್ದ. ಇಂದ್ರಜಾಲ ವಿದ್ಯೆಯಲ್ಲಿ ಅವನು ಅತಿ ನಿಪುಣನಾಗಿದ್ದ. ಸಂದರ್ಭ ಒದಗಿದಾಗ ದೊರೆಯ ಮುಂದೆ ತನ್ನ ನೈಪುಣ್ಯವನ್ನು ಪ್ರದರ್ಶಿಸಿ ಅವನ ಮನಸ್ಸನ್ನೂ ಸಂತೋಷಪಡಿಸುತ್ತಿದ್ದ. ಒಂದು ಸಾರಿ ಯಾವುದೋ ಒಂದು ಹಬ್ಬ ಬಂದಾಗ ದೊರೆಯ ಮಾವ, ರಾಜದೇವ, ಅಳಿಯನನ್ನು ಔತಣಕ್ಕೆ ಆಹ್ವಾನಿಸಿದ. ಅಳಿಯ ಆಹ್ವಾನವನ್ನು ಒಪ್ಪಿಸಿ ಪೂಜೆ ಇತ್ಯಾದಿಗಳ ನಂತರ ರಾಜದೇವನ ಪಟ್ಟಣವನ್ನು ಕುರಿತು ಹೊರಟ. ಬಹಳ ಬೇಗ ಹೊರಟದ್ದರಿಂದಲೂ, ಪ್ರಯಾಣದ ಆಯಾಸದಿಂದಲೂ ದೊರೆಗೆ ವಿಪರೀತವಾದ ಕ್ಷುದ್ಬಾಧೆ ಉಂಟಾಯಿತು. ಈ ಕ್ಷುದ್ಬಾಧೆ ಅವನ ಕುದುರೆಯನ್ನು ಅತಿ ಶೀಘ್ರವಾಗಿ ಓಡುವಂತೆ ಮಾಡಿ, ಔತಣ ತಯಾರಾಗುವ ಮೊದಲೇ ಊರು ತಲುಪುವಂತೆ ಮಾಡಿತು.

ಊರ ಹೊರವಲಯದಲ್ಲಿ ಅಳಿಯ ಬರುತ್ತಿರುವ ಸುದ್ದಿ ರಾಜದೇವನಿಗೆ ತಿಳಿದ ಕೂಡಲೇ ಅವನು ಚಿಂತಾಕ್ರಾಂತನಾದ. ಇನ್ನೂ ಅಡಿಗೆಯೇ ಆಗಿರಲಿಲ್ಲ. ಅಡಿಗೆಯವರು ಔತಣದ ಭಕ್ಷ್ಯಗಳನ್ನು ಇನ್ನೂ ಸಿದ್ಧಪಡಿಸುತ್ತಿದ್ದರು. ಹಸಿದು ಬಂದ ಅಳಿಯನನ್ನು ಕಾಯಿಸುವುದು ಹೇಗೆ? ದೊರೆಯ ಸಮಸ್ಯೆ ಪಕ್ಷಧಾರಾಮಿಶ್ರನಿಗೆ ತಿಳಿಯಿತು. ಆಗ ಆತ ಬಂದು,

"ಪ್ರಭೂ, ಚಿಂತೆಗೆ ಕಾರಣವಿಲ್ಲ. ನಿಮ್ಮ ಅಳಿಯಂದಿರನ್ನು ಎದುರುಗೊಳ್ಳಲು ನಾನು ಹೋಗುತ್ತಿದ್ದೇನೆ. ಅವರು ಔತಣ ತಯಾರಾಗುವುದಕ್ಕೆ ಮುಂಚೆ ಇಲ್ಲಿ ಬಾರದಿರುವಂತೆ ನಾನು ನೋಡಿಕೊಳ್ಳುತ್ತೇನೆ," ಎಂದು ಕುದುರೆಯೇರಿ ದಾರಿಯಲ್ಲಿ ಬರುತ್ತಿದ್ದ ಅಳಿಯನನ್ನು ನಿಲ್ಲಿಸಿ, ಸ್ವಾಗತ ಕೋರಿದ.

ನಂತರ ಇಬ್ಬರೂ ಅರಮನೆಯತ್ತ ಹೊರಟಾಗ, ದಾರಿಯ ಪಕ್ಕದಲ್ಲಿ ಎರಡು ಟಗರುಗಳು ಕಾದಾಡ ತೊಡಗಿದುವು. ಅಳಿಯ ಅದನ್ನೇ ನೋಡುತ್ತಾ

ನಿಂತ. ಇನ್ನೂ ಸ್ವಲ್ಪ ಮುಂದೆ ಹೋದಾಗ, ಅಖಾಡವೊಂದರಲ್ಲಿ ಇಬ್ಬರು ಕುಸ್ತಿಯ ಪಟುಗಳು ಸೆಣಸುತ್ತಿದ್ದರು. ಅದನ್ನೂ ನೋಡುತ್ತಿರುವಂತೆಯೇ ಆಕಾಶದಲ್ಲಿ ಹಾರುತ್ತಿದ್ದ ಕೊಕ್ಕರೆಯೊಂದರ ಬಾಯಿಂದ ಅದು ನುಂಗಿಹಾಕಿದ್ದ ಅನೇಕ ಗುಬ್ಬಿಗಳು ಒಳ್ಳೆಯ ಜಲಪಾತದಂತೆ ಹೊರಬಂದುವು. ಹಾಗೇ ಆಶ್ಚರ್ಯಪಡುತ್ತ ನಡೆದಾಗ ಜಿಂಕೆಯೊಂದನ್ನು ಅಟ್ಟಿಕೊಂಡು ಹೋಗುತ್ತಿದ್ದ ಬೇಟೆನಾಯಿಗಳ ಗುಂಪು ಎದುರಾಯಿತು.

ಅಳಿಯ ತನ್ನ ಹಸಿವನ್ನೂ ಮರೆತು ಇದೆಲ್ಲವನ್ನು ನೋಡುತ್ತ ಅರಮನೆ ತಲುಪಿದ. ಅದ್ಭುತವಾದ ಔತಣ ಸಿದ್ಧವಾಗಿತ್ತು. ಅವನು ಸಂತೋಷದಿಂದ ಊಟ ಮಾಡುತ್ತಿರುವಾಗ ದೊರೆ ಅವನು ದಾರಿಯಲ್ಲಿ ಕಂಡಿದ್ದೆಲ್ಲಾ ಪಕ್ಷಧಾರನ ಐಂದ್ರಜಾಲಿಕ ಮಹಾತ್ಮ್ಯೆಯಿಂದ ಎಂದು ತಿಳಿಸಿದಾಗ ಅವನಿಗೆ ಆಶ್ಚರ್ಯವೂ, ಸಂತೋಷವೂ ಆಯಿತು.

# ಮಾತುಗಾರನ ಕತೆ

ಕಾಂಚೀ ನಗರದಲ್ಲಿ ಸುಪ್ರತಾಪ ಎಂಬ ಒಬ್ಬ ದೊರೆ ಇದ್ದ. ಒಂದು ಸಾರಿ ಆ ನಗರದ ಭಟರು ರಾತ್ರಿ ಕಾವಲು ಕಾಯಲು ಹೋಗುತ್ತಿದ್ದಾಗ ನಾಲ್ಕು ಜನ ಕಳ್ಳರು ಒಂದು ಮನೆಗೆ ಕನ್ನ ಕೊರೆಯುತ್ತಿದ್ದುದನ್ನು ನೋಡಿ, ಆ ನಾಲ್ಕು ಜನರನ್ನೂ ಬಂಧಿಸಿ, ದೊರೆಯ ಮುಂದೆ ಹಾಜರುಪಡಿಸಿದರು. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ ದೊರೆಯ ಕರ್ತವ್ಯವಾದದ್ದರಿಂದ ದೊರೆ ಆ ನಾಲ್ಕು ಜನರನ್ನೂ ಶೂಲಕ್ಕೇರಿಸುವಂತೆ ಆಜ್ಞೆ ಮಾಡಿದ.

ರಾಜಾಜ್ಞೆಯಂತೆ ಭಟರು ಆ ನಾಲ್ಕು ಜನ ಕಳ್ಳರನ್ನೂ ವಧಾಸ್ಥಾನಕ್ಕೆ ಕೊಂಡೊಯ್ದು ಮೂರು ಜನರನ್ನು ಶೂಲಕ್ಕೇರಿಸಿದರು ನಾಲ್ಕನೆಯವನ ಸರದಿ ಬಂದಾಗ ಅವನು ಯೋಚಿಸಿದ: 'ಸಾವು ಎಷ್ಟೇ ಸಮೀಪಿಸಿದ್ದರೂ ವಿವೇಕಿಯಾದವನು ಅದನ್ನು ತಪ್ಪಿಸಿಕೊಳ್ಳುವ ಮಾರ್ಗವನ್ನು ಹುಡುಕಬೇಕು. ದೊರೆಯ ಕೋಪಕ್ಕೆ ಪಾತ್ರನಾಗಿರಲೀ, ಗುಣವಾಗದ ವ್ಯಾಧಿಗೆ ಬಲಿಯಾಗಿರಲೀ ಬುದ್ಧಿವಂತನಾದವನು ಯಾವುದಾದರೂ ಪರಿಹಾರ ಕಂಡುಕೊಳ್ಳಬೇಕು. ಯೋಚಿಸಿದ ತಂತ್ರ ಫಲಕಾರಿಯಾದರೆ ಜೀವ ಉಳಿಯುತ್ತದೆ; ಇಲ್ಲ, ಸಾವು ಹೇಗೂ ಕಟ್ಟಿಟ್ಟದ್ದೆ ನೋಡೋಣ'.

ಹೀಗೆ ಅವನು ಯೋಚಿಸುತ್ತಿದ್ದಾಗ ಭಟರು ಅವನನ್ನೂ ಶೂಲಕ್ಕೇರಿಸಲು ಬಂದರು ಆಗ, "ಅಯ್ಯಾ ಭಟರೆ, ನೀವು ರಾಜಾಜ್ಞೆಯನ್ನು ಪಾಲಿಸುತ್ತಿದ್ದೀರಿ. ಇದರಲ್ಲಿ ನಿಮ್ಮ ತಪ್ಪೇನೂ ಇಲ್ಲ ಆದರೆ ಒಂದು ಸಂಗತಿ. ನನಗೆ ಒಂದು ಮಹಾರಹಸ್ಯ ತಿಳಿದಿದೆ. ನೀವು ನನ್ನನ್ನು ಶೂಲಕ್ಕೇರಿಸಿದರೆ ಅದು ನನ್ನ ಜೊತೆಗೇ ಹೊರಟು ಹೋಗುತ್ತದೆ. ಆದ್ದರಿಂದ ಸಾಯುವ ಮೊದಲು ನಾನದನ್ನು ನಮ್ಮ ದೊರೆಗೆ ತಿಳಿಸಿ ಸಾಯಬಯಸುತ್ತೇನೆ" ಎಂದ.

ಭಟರು, "ಅಯೋಗ್ಯ, ನಿನಗೆ ಮಹಾರಾಜನೊಡನೆ ಮಾತುಕತೆ ಎಂದರೇನು? ನಿನ್ನಂಥವರ ಉಪಾಯಗಳನ್ನು ನಾವು ಬಲ್ಲೆವು. ಸುಮ್ಮನೆ ಶೂಲವನ್ನೇರು" ಎಂದರು.

"ಅಯ್ಯಾ, ನೀವು ನಂಬದಿರಬಹುದು. ಆದರೆ ನಿಜವಾಗಿ ನನಗೆ ಒಂದು ಮಹಾರಹಸ್ಯ ಗೊತ್ತು. ನಾನು ಅದನ್ನು ದೊರೆಗೆ ಹೇಳಿದರೆ, ಆತ ಖಂಡಿತವಾಗಿಯೂ ನಿಮಗೆ ತಕ್ಕ ಬಹುಮಾನ ನೀಡುತ್ತಾನೆ. ಅದರಲ್ಲಿ ಅನುಮಾನವಿಲ್ಲ ಇದರ ಮೇಲೆ ನಿಮ್ಮಿಷ್ಟ," ಎಂದ.

ಭಟರ ಮನಸ್ಸು ಹೊಯ್ದಾಡಿತು. ಇವನು ಹೇಳಿದಂತೆ ಮಾಡಿದರೆ ಬಾಧಕವೇನೂ ಇಲ್ಲ; ಜೊತೆಗೆ ಬಹುಮಾನವೂ ದೊರೆಯಬಹುದು ಎಂದು ಯೋಚಿಸಿ ಅವನನ್ನು ಮಹಾರಾಜನ ಮುಂದೆ ಕರೆದುಕೊಂಡು ಹೋದರು; ವಿಷಯವನ್ನು ತಿಳಿಸಿದರು. ದೊರೆಗೂ ಕುತೂಹಲ ಹುಟ್ಟಿತು. ಅವನು ಕಳ್ಳನನ್ನು ಕುರಿತು,

"ಏನದು? ಏನು ನಿನ್ನ ಮಹಾರಹಸ್ಯ?" ಎಂದು ಕೇಳಿದ.

"ದೊರೆಯೇ, ಬಂಗಾರದ ಬೆಳೆ ಬೆಳೆಯುವ ರಹಸ್ಯ ನನಗೆ ಗೊತ್ತು"

"ಹೇಗೆ ಬೆಳೆಯುತ್ತೀ? ಅದರ ವಿಧಾನ ಯಾವುದು?"

"ದೊರೆಯೇ, ನನಗೆ ಸಾಸಿವೆ ಗಾತ್ರದ ಬಂಗಾರದ ಕಾಳುಗಳನ್ನು ನೀವು ಒದಗಿಸಿ. ನಾನದನ್ನು ಸರಿಯಾದ ಸಮಯದಲ್ಲಿ, ಸ್ಥಳದಲ್ಲಿ ನಾಟಿಮಾಡುತ್ತೇನೆ. ಒಂದು ತಿಂಗಳ ಒಳಗೆ ಗಿಡ ಮೊಳೆತು, ಬಂಗಾರದ ಸಾಸಿವೆ ಹೂಗಳು ಗಿಡದ ತುಂಬ ಅರಳುತ್ತವೆ ಒಂದು ಗುಲಗಂಜಿ ತೂಕದ ಚಿನ್ನಕ್ಕೆ ಒಂದು ರೂಪಾಯಿ ತೂಕದ ಚಿನ್ನ ನಿಮ್ಮದಾಗುತ್ತದೆ"

"ಇದು ನಿಜವೋ, ಬರೀ ಕಗ್ಗವೋ?"

"ದೊರೆಯೇ, ನೀವೇ ಪರೀಕ್ಷೆ ಮಾಡಿ ನೋಡಿ. ಒಂದು ತಿಂಗಳ ಅವಧಿಯಲ್ಲಿ ನಾನು ಹೇಳಿದ್ದು ನಿಜವಾಗದಿದ್ದರೆ ನೀವು ನನ್ನನ್ನು ಮತ್ತೆ ಶೂಲಕ್ಕೇರಿಸಬಹುದು."

ದೊರೆ ಒಪ್ಪಿದ ಅರಮನೆಯ ಅಕ್ಕಸಾಲೆಯನ್ನು ಕರೆಸಿ, ಕಳ್ಳನು ಹೇಳಿದಂಥ ಬಂಗಾರದ ಸಾಸಿವೆ ಕಾಳು ತಯಾರಿಸಿ ಕೊಡಲು ಹೇಳಿದ. ಅದು ತಯಾರಾದ ನಂತರ ಕಳ್ಳ ಒಂದು ಸ್ಥಳವನ್ನು ಆರಿಸಲು ಪ್ರಾರಂಭಿಸಿದ ಕಡೆಗೆ, ಅರಮನೆಯ ಅಂತಃಪುರದ ಕೊಳದ ತಡಿಯಲ್ಲಿ ಒಂದು ಜಾಗವನ್ನು ಆಯ್ದು, ಅಗೆತ ಮಾಡಿಸಿ, ರಾತ್ರಿ ಒಂದು ಮುಹೂರ್ತವನ್ನು ನಿರ್ಧರಿಸಿ ದೊರೆಗೆ ಹೇಳಿ ಕಳಿಸಿದ ದೊರೆ ಬಂದ.

"ಪ್ರಭೂ, ಎಲ್ಲ ಸಿದ್ಧವಾಗಿದೆ. ಶುಭ ಮುಹೂರ್ತವೂ ಸಮೀಪಿಸಿದೆ. ಈಗ ಬಿತ್ತನೆ ಮಾಡಲು ಒಬ್ಬರು ಬೇಕಷ್ಟೆ," ಎಂದ.

"ನೀವೇ ಏಕೆ ಬಿತ್ತಬಾರದು?"

"ದೊರೆಯೇ, ನಾನಿದನ್ನು ಮಾಡಬಹುದಾಗಿದ್ದರೆ ಬಡತನದಲ್ಲಿ ಬೆಂದು ಕಳ್ಳತನಕ್ಕೇಕೆ ಇಳಿಯುತ್ತಿದ್ದೆ? ಕಳ್ಳರು ಯಾರು ಈ ಬಿತ್ತನೆ ಮಾಡಿದರೂ ಫಲವಿಲ್ಲ. ಇದನ್ನು ನನಗೆ ಮಂತ್ರೋಪದೇಶ ಮಾಡಿದ ಮಹಾಮುನಿಗಳೇ ಹೇಳಿದ್ದಾರೆ. ಯಾರೂ ಎಂದೂ ಮೋಸ ಮಾಡದವರು, ಕಳ್ಳತನ ಮಾಡದವರು ಬಿತ್ತನೆ ಮಾಡಿದರೆ ಮಾತ್ರ ಬಂಗಾರದ ಬೆಳೆ ಸಿದ್ಧಿಯಾಗುತ್ತದೆ. ಆದ್ದರಿಂದ, ತಾವೇ ಈ ಬಿತ್ತನೆ ಮಾಡಬೇಕು."

ದೊರೆ ಯೋಚಿಸಿದ. ತಾನು ಒಂದು ಕಾಲದಲ್ಲಿ ಮಾಡಿದ್ದ ಸಣ್ಣ ಪುಟ್ಟ ಕಳ್ಳತನಗಳ ನೆನಪು ಬಂತು. ಆಗ,

"ನಾನು ಮಾಡುವುದಿಲ್ಲ. ನನ್ನ ಸಚಿವರ ಕೈಲಿ ಬಿತ್ತನೆ ಮಾಡಿಸುತ್ತೇನೆ" ಎಂದು ಸಚಿವರನ್ನು ಕರೆಸಿದ. ಅವರು, "ಪ್ರಭೂ, ನಾವು ರಾಜ್ಯದ ಕ್ಷೇಮವನ್ನು ಕಾಯಬೇಕಾದವರು. ಅಂಥವರಲ್ಲಿ ಸ್ವಲ್ಪ ಸುಳ್ಳು, ಮೋಸ, ಸಮಯಾನುಸಾರವಾಗಿ ರಾಜ್ಯದ ಹಿತದೃಷ್ಟಿಯಿಂದ ಮಾಡಬೇಕಾಗುತ್ತದೆ. ಆದ್ದರಿಂದ ಬಿತ್ತನೆಗೆ ನಾವು ಯೋಗ್ಯರಲ್ಲ" ಎಂದರು. ಆಗ ಕಳ್ಳ, "ಸ್ವಾಮಿ, ನಿಮ್ಮ ರಾಜ್ಯದ ನ್ಯಾಯಾಧೀಶರನ್ನು ಕೇಳಬಹುದು" ಎಂದ ಸರಿ ಆತನೂ ಬಂದ. ಅವನದೂ ಅದೇ ಕತೆಯೇ! ಎಲ್ಲ ಸುಮ್ಮನೆ ನಿಂತರು. ಆಗ ಕಳ್ಳ, "ಪ್ರಭೂ, ಎಲ್ಲರೂ ಸುಳ್ಳು ಹೇಳಿರುವವರು, ಎಲ್ಲರೂ ಕಳ್ಳತನ ಮಾಡಿರುವವರು. ಅಂಥದ್ದರಲ್ಲಿ ನನಗೊಬ್ಬನಿಗೆ ಏಕೆ ಈ ಶೂಲಕ್ಕೇರಿಸುವ ಶಿಕ್ಷೆ?" ಎಂದ. ನೆರೆದಿದ್ದ ಎಲ್ಲರೂ ನಗಲು ಪ್ರಾರಂಭಿಸಿದರು. ದೊರೆಗೂ ನಗು ಬರದಿರಲಿಲ್ಲ. "ಆಯಿತು, ನಿನ್ನ ನಾಲಗೆ, ಬುದ್ಧಿಯ ಬಲದಿಂದ ಬದುಕಿದೆ. ಇನ್ನು ಮುಂದೆ ನನ್ನ ಜೊತೆ ಇದ್ದು, ಇಂಥದೇ ಹಾಸ್ಯದ ಕತೆ ಹೇಳುತ್ತಿರು" ಎಂದ. ಹೀಗೆ ಬುದ್ಧಿವಂತಿಕೆ ಜೀವ ಉಳಿಸಬಲ್ಲುದು.

# ನೈಜ ಸತ್ಕರ್ಮಜೀವಿಯ ಕತೆ

ಮಿಥಿಲಾ ದೇಶದಲ್ಲಿ ಕಾಯಸ್ಥ ಜಾತಿಯಲ್ಲಿ ಹುಟ್ಟಿದ ಬೋಧಿ ಎನ್ನುವನು ಒಬ್ಬ ಇದ್ದ. ಅವನು ಅವನ ಜಾತಿಯ ಕಟ್ಟಳೆಯಂತೆ ದೊರೆಯ ಸೇವಾ ವೃತ್ತಿಯನ್ನು ಮಾಡುತ್ತಿದ್ದ. ಯಾವ ಜೀವಿಗೂ ಅವನು ಎಂದೂ ಯಾವ ತೊಂದರೆಯನ್ನೂ ಉಂಟುಮಾಡಲಿಲ್ಲ; ಯಾರ ವಸ್ತುವನ್ನೂ ಎಂದೂ ಅಪಹರಿಸಲಿಲ್ಲ; ಯಾರ ಮನೆಯ ಹೆಣ್ಣನ್ನೂ ಬಯಕೆಯ ಕಣ್ಣಿನಿಂದ ನೋಡಲಿಲ್ಲ. ದೊರೆ ಕೊಟ್ಟ ಸಂಬಳದಲ್ಲಿ ಮಾತ್ರ ತನ್ನ ಜೀವನ ನಿರ್ವಹಣೆ ಮಾಡಿದ ದೊರೆತ ಸಮಯವನ್ನೆಲ್ಲ ಶಿವನ ಆರಾಧನೆಯಲ್ಲಿ ಕಳೆದ.

ಹೀಗೆ ದಿನಗಳು ಉರುಳಿದುವು. ಅವನ ಅಂತ್ಯಕಾಲವೂ ಸಮೀಪಿಸಿತು. ಆಗ ಯಾರೋ ಹೇಳುತ್ತಿದ್ದ ಪುರಾಣದ ಈ ವಚನ ಅವನ ಕಿವಿಗೆ ಬಿದ್ದಿತು:

"ಗಂಗೆ ಕೂಡ ಹೀಗೆ ಅನ್ನುತ್ತಾಳೆ: 'ಯಾರಿಗೂ ಬಾಧೆ ಕೊಡದಿರುವ, ಯಾರ ವಸ್ತುವನ್ನೂ ಅಪಹರಿಸದಿರುವ, ಯಾರ ಹೆಣ್ಣನ್ನೂ ಕೆಟ್ಟ ಕಣ್ಣಿಂದ ನೋಡದ ಪುಣ್ಯಜೀವಿ ಯಾವತ್ತು ಬಂದು ನನ್ನನ್ನು ಪುನೀತಗೊಳಿಸುತ್ತಾನೋ ಕಾಣೆ."

ಇದನ್ನು ಕೇಳಿದ ಕೂಡಲೇ ಬೋಧಿ ಯೋಚಿಸಿದ: "ನಾನು ಹುಟ್ಟಿದಂದಿನಿಂದ ಯಾವ ಜೀವಿಗೂ ಬಾಧೆಯುಂಟುಮಾಡಿಲ್ಲ; ಇನ್ನೊಬ್ಬರ ಸ್ವತ್ತನ್ನು ಅಪಹರಿಸಿಲ್ಲ; ಯಾರೊಬ್ಬರ ಮಡದಿಯನ್ನೂ ಮನಸ್ಸಿನಲ್ಲಿ ಆಸೆ ಪಟ್ಟಿಲ್ಲ. ಗಂಗೆ ಕೇಳಿದ ಗುಣಗಳೆಲ್ಲ ನನ್ನಲ್ಲಿವೆ. ನನ್ನ ಇಡೀ ಜೀವನವನ್ನು ಸತ್ಕರ್ಮಗಳಲ್ಲಿ ಕಳೆದಿದ್ದೇನೆ. ಆದ್ದರಿಂದ ಈಗ ಗಂಗೆಯ ಈ ಮಾತುಗಳನ್ನು ನಾನು ಪರೀಕ್ಷೆ ಮಾಡಿ ನೋಡುತ್ತೇನೆ".

ಹೀಗೆ ಯೋಚಿಸುತ್ತ ಬೋಧಿ ಗಂಗಾನದಿಯತ್ತ ನಡೆದ. ದಡದಿಂದ ಸುಮಾರು ಒಂದು ಮೈಲಿ ದೂರದಲ್ಲಿ, ಬೋಧಿ ನಿಂತು ಪುರಾಣ ಶ್ಲೋಕದ ಅರ್ಧವನ್ನು ಹೇಳಿ ಅದರ ಉಳಿದರ್ಧವನ್ನು ತಾನೇ ಪೂರ್ಣಗೊಳಿಸಿ ಹೀಗೆ ಹೇಳಿದ:

"ಎಂದೂ ಯಾವ ಜೀವಿಯನ್ನೂ ಘಾಸಿಗೊಳಿಸದ, ಯಾರೊಬ್ಬರ ಸ್ವತ್ತನ್ನೂ ಅಪಹರಿಸದ, ಯಾರ ಮಡದಿಯನ್ನೂ ಎಂದೂ ಬಯಸದ, ನಾನು, ಬೋಧಿ ಬಂದಿದ್ದೇನೆ ಪವಿತ್ರ ಗಂಗೆಯೇ, ಬಾ. ನೀನು ಪುನೀತಳಾಗು."

ಇದನ್ನವನು ಹೇಳಿದ ಮರುಕ್ಷಣದಲ್ಲೇ ಗಂಗೆ ಆನಂದಭರಿತಳಾಗಿ, ತನ್ನ ಎರಡೂ ದಂಡೆಗಳನ್ನು ಮೀರಿ, ಭೋರ್ಗರೆಯುತ್ತ ಆಮೆ, ಮೀನು, ಮೊಸಳೆಗಳನ್ನು ತನ್ನ ಅಲೆಗಳ ಮೇಲೆ ಕುಣಿಸುತ್ತ, ಮುತ್ತಿನ ಹಾರದಂತೆ ಕಂಗೊಳಿಸುತ್ತ, ಮುನ್ನುಗ್ಗಿ ಬೋಧಿಯನ್ನು ತನ್ನೊಳಗೆ ಅಂತಸ್ಥನನ್ನಾಗಿಸಿ ಕೊಂಡಳು. ಬೋಧಿ ಅಲ್ಲಿಯೇ ತನ್ನ ಶರೀರವನ್ನು ಚೆಲ್ಲಿ ಸ್ವರ್ಗ ಸೇರಿದ. ವಿದ್ಯಾಪತಿಯೂ ಹೀಗೆ ತನ್ನ ಅಂತ್ಯವನ್ನು ಕಂಡುಕೊಂಡ ಎನ್ನುವ ಕತೆಯೂ ಪ್ರಚಲಿತವಾಗಿದೆ.

ಇಂದಿಗೂ ಜನ ಈ ಕಾಯಸ್ಥ ಮಾಡಿ ತೋರಿಸಿದ ಪವಾಡವನ್ನು ಮುಕ್ತ ಮನಸ್ಸಿನಿಂದ ಕೊಂಡಾಡುತ್ತಾರೆ ಪವಿತ್ರಳಾದ ಗಂಗೆಯನ್ನೇ ಪರೀಕ್ಷೆಗೆ ಗುರಿಮಾಡಿದ ಈತನನ್ನು ಭಕ್ತಿಯಿಂದ ಹಾಡಿ ಹೊಗಳುತ್ತಾರೆ

ಅವನ ನಶ್ವರ ಶರೀರ ಹೋಗಬಹುದು; ಅವನ ಅದೃಷ್ಟ ಅವನನ್ನು ತೊರೆಯಬಹುದು; ಅವನ ಬಂಧು ಮಿತ್ರರು ಅವನನ್ನು ಬಿಡಬಹುದು; ಆದರೆ ಅವನ ಕೀರ್ತಿ ಈ ವಿಶಾಲ ವಿಶ್ವದಲ್ಲಿ, ಹಾಡು-ಕತೆಗಳಲ್ಲಿ ಶಾಶ್ವತವಾಗಿ ನಿಲ್ಲುತ್ತದೆ.

# ವಿವೇಕಿಯಾದ ರಾಜನ ಕತೆ

ಶ್ರಮ, ಪರಾಕ್ರಮಗಳಿಂದ ಸಂಪಾದಿಸಿದ್ದನ್ನು ಜಾಣತನ ಹಾಗೂ ವಿಚಕ್ಷಣತೆಯಿಂದ ಯಾರು ಕಾಪಾಡಿಕೊಳ್ಳುತ್ತಾರೋ ಅವರು ವಿವೇಕಿಗಳು; ಅದೃಷ್ಟಲಕ್ಷ್ಮಿ ಅವರನ್ನು ಎಂದೂ ತೊರೆದು ಹೋಗುವುದಿಲ್ಲ:

ಜಯಂತಿ ಎನ್ನುವ ದೇಶದಲ್ಲಿ ವೀರಪರಾಕ್ರಮ ಎನ್ನುವ ಒಬ್ಬ ದೊರೆ ಇದ್ದ. ನ್ಯಾಯನಿಷ್ಠನಾದ ದೊರೆಗೆ ಮಕ್ಕಳಿದ್ದರು, ಬೇಕಾದ ಹಾಗೆ ಸಂಪತ್ತೂ ಇತ್ತು; ಆತ ತೃಪ್ತನೂ, ಸಂತೋಷಿಯೂ ಆಗಿದ್ದ.

ಒಂದು ರಾತ್ರಿ ಅವನು ಹಾಸಿಗೆಯಲ್ಲಿ ಸುಖವಾಗಿ ಮಲಗಿರುವಾಗ ಯಾರೋ ಹೆಂಗುಸೊಬ್ಬಳು ಅಳುತ್ತಿರುವ ಧ್ವನಿ ಕೇಳಿಸಿತು. ಆ ಧ್ವನಿಯ ಜಾಡನ್ನು ಹಿಡಿದು ಹೊರಟ ದೊರೆಗೆ ಒಂದು ಆಶ್ಚರ್ಯ ಕಾದಿತ್ತು: ಮಹಾದ್ವಾರದ ಕಿಂಚಿದ್ದೂರದಲ್ಲೇ ಸಕಲ ವಸ್ತ್ರಾಭರಣ ಭೂಷಿತೆಯೂ ಸರ್ವಾಂಗ ಸುಂದರಿಯೂ ಯೌವನವತಿಯೂ ಆದ ಸ್ತ್ರೀಯೊಬ್ಬಳು ಧಾರಾಕಾರವಾಗಿ ಕಣ್ಣೀರು ಸುರಿಸುತ್ತಾ ಕುಳಿತಿದ್ದಳು.

"ಮಂಗಳಾಂಗಿ, ಏಕೆ ಅಳುತ್ತಿದ್ದೀ? ನಿನ್ನ ದುಃಖಕ್ಕೆ ಕಾರಣ ಏನು?" ಎಂದು ದೊರೆ ಕೇಳಿದ.

"ದೊರೆಯೇ, ನಾನು ನಿನ್ನ ಅದೃಷ್ಟ ಲಕ್ಷ್ಮಿ. ನ್ಯಾಯನಿಷ್ಠನಾದ ನಿನ್ನ ಬಾಹುಗಳಲ್ಲಿ ನಾನಿದುವರೆಗೆ ನೆಲೆಸಿದ್ದೆ. ನಾನೀಗ ನಿನ್ನನ್ನು ಬಿಟ್ಟು ಹೋಗಬೇಕು. ಅದಕ್ಕಾಗಿ ರೋಧಿಸುತ್ತಿದ್ದೇನೆ."

"ಅದಕ್ಕೆ ನೀನು ಯಾಕೆ ರೋಧಿಸಬೇಕು?"

"ಏಕೆಂದರೆ ನಿನ್ನಲ್ಲಿ ನನಗೆ ಅತಿಶಯವಾದ ಪ್ರೀತಿ ಇದೆ"

"ಪ್ರೀತಿ ಇದ್ದಲ್ಲಿ ತ್ಯಜಿಸಿ ಹೋಗಲು ಏನು ಕಾರಣ?"

"ನಿನಗೆ ತಿಳಿಯದೇ? ನಾನು ಅದೃಷ್ಟ ಲಕ್ಷ್ಮಿ. ಒಂದೇ ಜಾಗದಲ್ಲಿ ನಾನೆಂದೂ ನೆಲಸಲಾರೆ. ನಾನು ಚಂಚಲೆ. ಕವಿಯೊಬ್ಬ ಹೇಳಿದ ಹಾಗೆ, 'ಶೂರರನ್ನು ಕಂಡರೆ ಆಕೆಗೆ ಅಂಜಿಕೆ; ಮೃದುಸ್ವಭಾವದವರನ್ನು ಆಕೆ ಇಷ್ಟಪಡುವುದಿಲ್ಲ;

ವಿವೇಕಿಗಳಾದವರು ಆಕೆಯ ಮನಸ್ಸಿಗೆ ಬರುವುದಿಲ್ಲ. ಆಕೆ ಒಂದು ಕಾಲದಲ್ಲಿ ಒಂದು ನೆಲೆಯಲ್ಲಿ ನಿಲ್ಲುವವಳಲ್ಲ. ಅವಳ ಆಗಮನ–ನಿಷ್ಕ್ರಮಣಗಳಿಗೆ ಯಾವ ನಿಯಮವೂ ಇಲ್ಲ.''

ದೊರೆ ಯೋಚನೆ ಮಾಡಿದ: 'ನನ್ನಲ್ಲಿ ಏನು ತಪ್ಪಿದೆ? ಯಾವ ತಪ್ಪೂ ಇಲ್ಲದ ಮನುಷ್ಯನನ್ನು ಅದೃಷ್ಟ ಲಕ್ಷ್ಮಿ ಅಕಾರಣವಾಗಿ ತೊರೆದು ಹೋಗುವುದಿಲ್ಲ. ನನ್ನಲ್ಲಿ ಇರಬಹುದಾದ ದೋಷ ಎಂದರೆ ನನಗಿರುವ ಅನೇಕ ಗಂಡುಮಕ್ಕಳು, ಅಷ್ಟೆ' ವಿವೇಕಿಗಳು ಹೇಳುವಂತೆ: ''ಮಗನಿಲ್ಲದ ರಾಜ ರಾಜನಲ್ಲ; ಅನೇಕ ಗಂಡುಮಕ್ಕಳಿರುವ ರಾಜನೂ ರಾಜನಲ್ಲ. ಏಕೆಂದರೆ, ರಾಜ್ಯದ ಆಸೆಯಿಂದ, ಕೀರ್ತಿಯ ಲಾಲಸೆಯಿಂದ, ಧನದ ವ್ಯಾಮೋಹದಿಂದ ಅವರವರಲ್ಲೇ ವಿರೋಧ ಬೆಳೆದು ಯಾರೂ ರಾಜರಾಗಿ ಉಳಿಯುವುದಿಲ್ಲ.''

ಹೀಗೆ ಚಿಂತಿಸಿ, ದೊರೆ ಈ ಮಾತುಗಳನ್ನು ಆಡಿದ: ''ಪದ್ಮಮುಖಿ, ನೀನು ಹೋಗುವುದಾದರೆ ನಿನ್ನನ್ನು ತಡೆಯಲು ಯಾರು ಶಕ್ತರು? ನಿನಗೆ ಎಲ್ಲಿ ಮನಸ್ಸು ಬರುತ್ತದೋ ಅಲ್ಲಿಗೆ ಹೋಗು. ಆದರೆ ನಾನು ಒಂದು ವರವನ್ನು ಬೇಡುತ್ತೇನೆ. ದಯವಿಟ್ಟು ನೀನು ನನಗೆ ಅದನ್ನು ನೀಡಬೇಕು''

''ನೀನು ಕೇಳುವ ವರ ನನ್ನನ್ನು ಇರಲು ನಿರ್ಬಂಧಿಸದಿದ್ದರೆ ಕೊಡುತ್ತೇನೆ ಅದು ಯಾವುದಾದರೂ ಸರಿಯೇ.''

''ದೇವಿ, ನನ್ನ ಮಕ್ಕಳಲ್ಲಿ ಎಂದೂ ಒಡಕು, ವ್ಯಾಜ್ಯ ಬರದಿರಲಿ''

''ಹಾಗಾದಲ್ಲಿ, ನಿಮ್ಮಲ್ಲಿ ವಿರೋಧವಿಲ್ಲದಿದ್ದಲ್ಲಿ ನಾನು ನಿನ್ನನ್ನು ಬಿಟ್ಟು ಹೋಗುವುದಾದರೂ ಹೇಗೆ? ನಾನು ನಿರಂತರವಾಗಿ ಇಳಿಜಾರಿನಲ್ಲಿ ಹರಿಯುವ ನದಿಯಂತೆ ಚಲಿಸುವವಳು; ಮಿಂಚಿನಂತೆ ಪ್ರಕಾಶಿಸಿ ಮಾಯವಾಗುವವಳು; ಸಂಜೆಯಂತೆ ಕ್ಷಣಕಾಲ ವರ್ಣಮಯವಾಗಿ ಕಾಣುವವಳು; ಯೋಗ್ಯೆ ಆದರೂ ಗಂಡನಿಂದ ಗಂಡನಿಗೆ ಓಡಿಹೋಗುವವಳು. ಇದು ನನ್ನ ಸ್ವಭಾವ. ಎಲ್ಲಿ ನ್ಯಾಯವಿಲ್ಲವೋ ಅಲ್ಲಿ ನಾನಿಲ್ಲ; ಎಲ್ಲಿ ಒಳಜಗಳ ಇಲ್ಲವೋ ಅಲ್ಲಿ ನನ್ನ ವಾಸ'' ಎಂದು ಅದೃಷ್ಟ ಲಕ್ಷ್ಮಿ ಆ ರಾಜನೊಡನೆಯೇ ಅನೇಕ ಕಾಲ ನೆಲೆನಿಂತಳು.

ಯಾವ ಭಾವ ಪುರುಷನಲ್ಲಿ ಸ್ತ್ರೀಯ ಬಗ್ಗೆ ಪ್ರೀತಿಯನ್ನು ಹುಟ್ಟಿಸಿ ಸ್ಥಾಯಿಯಾಗಿ ನಿಲ್ಲುತ್ತದೋ ಅದು ಶೃಂಗಾರ; ಈ ಶೃಂಗಾರ ಪ್ರೇಮದಲ್ಲಿ ಪರ್ಯವಸಾನವಾಗುತ್ತದೆ. ಪ್ರೇಮ ಶೃಂಗಾರ ಜನ್ಯವಾದದ್ದು.

ಮೂರು ಪುರುಷಾರ್ಥಗಳಲ್ಲಿ ಅತಿ ಮುಖ್ಯವಾದದ್ದು ಕಾಮ; ಅದು ಧರ್ಮ, ಅರ್ಥಗಳ ಫಲ. ಯಾರು ಇದನ್ನು ಅನ್ವೇಷಿಸಿ ಹೊರಡುತ್ತಾರೋ ಅವರು ಪ್ರೇಮಿಗಳು.

ಈ ಪ್ರೇಮಿಗಳಲ್ಲಿ ಐದು ವಿಧ ಎಂದು ತಿಳಿದವರು ಹೇಳುತ್ತಾರೆ. ಅವರುಗಳು ಯಾರೆಂದರೆ: ಅಚಂಚಲ, ವಿಶ್ವಾಸಿ, ಜಾಣ, ವಂಚಕ ಮತ್ತು ವ್ಯಾಮೋಹಿ.

ಈಗ ಅಚಂಚಲ ಪ್ರೀತಿಯ ಕತೆ ಹೇಳುತ್ತೇನೆ.

# ಅಚಂಚಲ ಪ್ರೇಮಿಯ ಕತೆ

ಯಾರು ಕಾಮಾಭಿಲಾಷಿಯಾಗಿದ್ದರೂ ಸನ್ನಡತೆಯನ್ನು ಮೀರುವು ದಿಲ್ಲವೋ, ಯಾರು ತನ್ನ ಪತ್ನಿಯಲ್ಲೇ ಅನುರಕ್ತನಾಗಿರುತ್ತಾನೋ, ಯಾರು ಪರದಾರಾ ವ್ಯಾಮೋಹ ವಿಮುಖನಾಗಿರುತ್ತಾನೋ ಅವನೇ ಅಚಂಚಲ ಪ್ರೇಮಿ.

ಹಿಂದೆ ಶೂದ್ರಕ ಎಂಬ ಒಬ್ಬ ದೊರೆ ಇದ್ದ. ಅವನಿಗೆ ಸುಖಾಲಸ ಎನ್ನುವ ಹೆಂಡತಿ ಇದ್ದಳು. ಯೌವನ ಕಾಲದಲ್ಲೇ ಅವರ ಪ್ರೀತಿ ಅತಿಶಯವಾಗಿ ಬೆಳೆದು, ಕಾಲಾನುಕ್ರಮೇಣ ಒಬ್ಬರನ್ನೊಬ್ಬರು ಅಗಲಿರಲಾರದಂಥ ಪ್ರೇಮವನ್ನು ಪರಸ್ಪರವಾಗಿ ಸಂಪಾದಿಸಿದರು. ಪ್ರೇಮ ಅವರನ್ನು ಎಷ್ಟು ಒಗ್ಗೂಡಿಸಿತೆಂದರೆ ದೊರೆ ಇನ್ನೊಬ್ಬಳನ್ನು ವರಿಸುವ ವಿಚಾರವನ್ನೇ ಎಂದೂ ಮಾಡಲಿಲ್ಲ. ಕವಿಯ ಹೇಳಿಕೆಯಂತೆ,

ಯುವ ಜನರ ಇಂಥ ಧರ್ಮಸಮ್ಮತ ಪ್ರೇಮ, ಇಬ್ಬರನ್ನು ಒಬ್ಬ ರನ್ನಾಗಿಸುವ ಪ್ರೇಮ ರಾಮ–ಸೀತೆಯರ ಪ್ರೇಮದಂತೆ ಚಿರಾಯುವಾಗಿರಲಿ.

ಇದೇ ರೀತಿ ಭರತ ಮೂರು ಬಗೆಯ ಸ್ತ್ರೀಜನರ ಸ್ವಭಾವವನ್ನು ವರ್ಣಿಸುತ್ತ, 'ಸಹಧರ್ಮಿಣಿ'ಯ ಬಗ್ಗೆ ಹೀಗೆ ಹೇಳಿದ್ದಾನೆ:

"ಸಂಪತ್ತು ಇದ್ದಾಗ, ಸಂಕಟಗಳು ಒದಗಿದಾಗ, ಇಷ್ಟೇಕೆ ಸಾವಿನಲ್ಲೂ ಆಕೆ ತನ್ನ ಪತಿಯನ್ನು ಅಗಲುವುದಿಲ್ಲ. ಯಾವುದೋ ಪೂರ್ವಜನ್ಮದ ಪುಣ್ಯಫಲ ದಿಂದ ಗಂಡಸು ತನ್ನ ಹೆಂಡತಿಯಲ್ಲಿ ಇಂಥ ಪ್ರೀತಿಯನ್ನು ಕಾಣುತ್ತಾನೆ."

ಶೂದ್ರಕ ಸುಖಾಲಸಿಯರು ಇಂಥ ಪ್ರೀತಿಯಲ್ಲಿ ಅನೇಕ ವರ್ಷಗಳನ್ನು ಕಳೆದರು. ಅವರಿಗೆ ಬೇಕೆನ್ನಿಸಿದಾಗ ಅರಮನೆಯ ಉದ್ಯಾನವನದಲ್ಲೋ, ಸರೋವರದ ತೀರದಲ್ಲಿಯೋ ಸಂತೋಷದಿಂದ ತಮ್ಮ ಶೃಂಗಾರ ಜೀವನವನ್ನು ನಡೆಸಿದರು. ಹೀಗಿರುವಾಗ ಒಂದು ರಾತ್ರಿ ರಾಣಿ ಸುಖಾಲಸೆ ಸುಖ ನಿದ್ದೆಯಲ್ಲಿ ಮುಳುಗಿರುವಾಗ ವಿಷಸರ್ಪವೊಂದು ಬಂದು ಆಕೆಯನ್ನು ಕಚ್ಚಿಬಿಟ್ಟಿತು. ದೊರೆ ದಿಗ್ಭ್ರಾಂತನಾದ. ಆಕೆಯನ್ನು ಉಳಿಸಿಕೊಳ್ಳಲು ಸಾಧ್ಯವಾದದ್ದನ್ನೆಲ್ಲ ಮಾಡಿದ. ದೇಶ ವಿದೇಶಗಳಿಂದ ವೈದ್ಯರನ್ನು ಕರೆಸಿದ. ಕಡೆಗೆ ಆಕೆಯ ಜೀವ

ವಿಷೋಪಹಾರಿ ಔಷಧಿಗಳಿಂದ ಉಳಿಯಿತಾದರೂ ಆಕೆ ಅತ್ಯಂತ ಕುರೂಪಿಯಾದಳು. ಯಾರ ತಲೆಯಲ್ಲಿ ದುಂಬಿಯಂತೆ ಕಪ್ಪಾದ, ದಪ್ಪ, ನೀಳ ಕೇಶರಾಶಿ ಇತ್ತೋ ಅದೀಗ ಮಾಯವಾಗಿತ್ತು; ಹುಣ್ಣಿಮೆಯ ಚಂದ್ರನಂತೆ ಸುಂದರವಾಗಿದ್ದ ಆಕೆಯ ಮುಖ ಕಪ್ಪು ಹಿಡಿದು, ವಿಕಾರವಾಗಿ ಊದಿಕೊಂಡಿತ್ತು; ಎಳೆಯ ಬಿಸಿಲಿನಲ್ಲಿ ಹೊಳೆಯುವ ತಾವರೆಯಂತಿದ್ದ ಅವಳ ಕಣ್ಣುಗಳು ಈಗ ಕುಳಿ ಬಿದ್ದು, ಕಾಂತಿ ಶೂನ್ಯವಾಗಿದ್ದುವು; ಕಮಲದಂತೆ ಪರಿಮಳವನ್ನು ಸೂಸುತ್ತಿದ್ದ ಅವಳ ಮೈ ಈಗ ಕೊಳೆತ ಕೆಟ್ಟ ವಾಸನೆಯನ್ನು ಹರಡುತ್ತಿತ್ತು.

ಸುಖಾಲಸೆ ಇಷ್ಟು ಕುರೂಪಿಯಾದರೂ ದೊರೆಯ ಪ್ರೇಮ ಎಳ್ಳಷ್ಟೂ ಕಡಿಮೆಯಾಗಲಿಲ್ಲ. ಆತ ಯಾವಾಗಲೂ ಆಕೆಯ ಹಿಂದಿನ ರೂಪ ಲಾವಣ್ಯಗಳನ್ನು ನೆನೆಯುತ್ತಿದ್ದ. ಅವಳನ್ನು ಬಿಟ್ಟಿರಲು ಅವನಿಗೆ ಸಾಧ್ಯವೇ ಆಗಲಿಲ್ಲ. ನಿದ್ದೆ ಹೋಯಿತು; ಹಸಿವಾದರೂ ಊಟ ಮಾಡುವ ಆಸಕ್ತಿ ಮಾಯವಾಯಿತು; ತಾಂಬೂಲ ಹಾಕಿಕೊಳ್ಳಬೇಕೆಂದು ಅನ್ನಿಸಲೇ ಇಲ್ಲ. ಸಚಿವರೊಡನೆ ನಡೆಸುತ್ತಿದ್ದ ಮಂತ್ರಾಲೋಚನೆ ನಿಂತುಹೋಯಿತು. ಸೈನ್ಯ ಪರೀಕ್ಷೆಯ ಗೊಡವೆಗೂ ಅವನು ಹೋಗಲಿಲ್ಲ. ಪಟದಲ್ಲಿ ಚಿತ್ರಿತವಾಗಿರುವ ಮನುಷ್ಯನಂತೆ ಆತನ ಮೈ ಮನಸ್ಸುಗಳು ನಿಶ್ಚೇಷ್ಟಿತವಾದುವು.

ದೊರೆಯ ಈ ಸ್ಥಿತಿಯನ್ನು ನೋಡಿ ಮರುಗಿದ ಅವನ ಸಚಿವರು ಅವನ ಬಳಿ ಬಂದು, "ದೇವಾ, ಮಹಾರಾಣಿಯವರು ಅವರ ಕರ್ಮಕ್ಕೆ ವಶರಾಗಿ ಹೀಗಾಗಿದ್ದಾರೆ. ಇಂಥಲ್ಲಿ ಯಾರು ತಾನೇ ಏನು ಮಾಡಲು ಸಾಧ್ಯ? ನಿಮ್ಮ ಸಾಮ್ರಾಜ್ಯ ಅತಿ ವಿಸ್ತಾರವಾದದ್ದು. ಅದರ ಬಗ್ಗೆ ಗಮನ ನೀಡಬೇಡವೇ? ಹೆಚ್ಚು ಕಡಿಮೆ ಗತಪ್ರಾಣಳಾಗಿರುವ ಒಬ್ಬ ಸ್ತ್ರೀಗೋಸ್ಕರ ತಾವು ಹೀಗೆ ಹತಾಶರಾಗಿರಬಾರದು. ಅದು ತಮಗೆ ತಕ್ಕುದಲ್ಲ. ನೀವು ಮನಸ್ಸು ಮಾಡಿದರೆ ಯೌವನವತಿಯರೂ, ಗುಣವತಿಯರೂ ಆದ ಅನೇಕ ಯುವತಿಯರನ್ನು ನೀವು ಮದುವೆಯಾಗಬಹುದು. ಸಂತೋಷವನ್ನು ಭೋಗಿಸದೆ ನೀವು ಹೀಗೆ ಕಾಲ ನೂಕುವುದು ಸರಿಯಲ್ಲ" ಎಂದು ನಿವೇದಿಸಿದರು. ದೊರೆ, "ಅಯ್ಯಾ, ಸಚಿವರೆ, ಕೇಳಿ. ಈಕೆ ನನ್ನ ಧರ್ಮಪತ್ನಿ. ಈವರೆಗೆ ನನ್ನ ಎಲ್ಲ ಒಳ್ಳೆಯ ಕೆಟ್ಟ ದಿನಗಳಲ್ಲಿ ನನ್ನ ಸಹಭಾಗಿನಿಯಾಗಿದ್ದಾಳೆ. ನನ್ನ ಸರ್ವಸುಖದ ಮೂಲ ಅವಳೇ. ನನ್ನ ಜೀವವೂ ಅವಳೇ. ಆಕೆಯ ಸಾವು ಸಮೀಪಿಸುವ ವರೆಗೂ ನಾನು ಜೀವವನ್ನು ಹಿಡಿದುಕೊಂಡಿರುತ್ತೇನೆ. ಯಾಕೆಂದರೆ ನಾನು ಕಾಲಗತನಾದರೆ ಆಕೆಯ ದುಃಖ ಹೆಚ್ಚಾಗುತ್ತದೆ. ಸುಖ–ಸಂತೋಷಗಳನ್ನು, ದುಃಖ–ಸಂಕಟಗಳನ್ನು

ಸಮಾನವಾಗಿ ಹಂಚಿಕೊಳ್ಳದ ದಂಪತಿಗಳು ಎಂಥ ದಂಪತಿಗಳು? ಅವರದು ಎಂತಹ ವಿವಾಹ? ಹೀಗಿರುವಾಗ ನಾನು ರಾಜ್ಯದ ಚಿಂತನೆ ಹೇಗೆ ಮಾಡಲಿ? ಅಥವಾ ಇನ್ನೊಂದು ವಿವಾಹವನ್ನು ಕುರಿತು ಹೇಗೆ ಯೋಚಿಸಲಿ? ನಾಚಿಕೆ ಇಲ್ಲದವರು, ಸಜ್ಜನಿಕೆ ತೊರೆದವರು ಮಾತ್ರ ಎರಡನೆಯ ಹೆಂಡತಿಯನ್ನು ಬಯಸಬಹುದು. ಆದ್ದರಿಂದ ಆಕೆ ನನ್ನ ಜೀವಸರ್ವಸ್ವವೇ. ಆಕೆಯನ್ನು ಬಿಟ್ಟು ಏನೂ ಮಾಡಲಾರೆ,'' ಎಂದ.

ದೊರೆಯ ಮಾತುಗಳನ್ನು ಕೇಳಿದ ನಂತರ ಸಚಿವರು, ``ನಾವು ರಾಣಿಯನ್ನು ಉಳಿಸದೇ ದೊರೆಯನ್ನು ಉಳಿಸಲಾರೆವು. ಆದ್ದರಿಂದ ಆಕೆಯನ್ನು ಮತ್ತೆ ಮೊದಲಿನಂತಾಗಲು ನಾವು ತಕ್ಕ ಪ್ರಯತ್ನಗಳಲ್ಲಿ ತೊಡಗಬೇಕು. ಇದು ನಮ್ಮ ಕರ್ತವ್ಯ'' ಎಂದು ಸಾಮ್ರಾಜ್ಯದ ನಾನಾ ಭಾಗಗಳಿಂದ ವೈದ್ಯರನ್ನೂ, ಪಂಡಿತರನ್ನೂ ಕರೆಸಿದರು. ಅವರಲ್ಲೊಬ್ಬ ರಾಣಿಯ ದೇಹವನ್ನು ಹೊಕ್ಕಿದ್ದ ವಿಷ ಎಂಥದು ಎಂದು ಪತ್ತೆ ಮಾಡಿ, ಅದನ್ನು ನಿಸ್ಸತ್ವಗೊಳಿಸುವಂಥ ಔಷಧಿಯನ್ನು ಕೊಟ್ಟ. ಅದನ್ನು ಕುಡಿದ ಕೂಡಲೇ ರಾಣಿ ಉನ್ಮತ್ತಳಾಗಿ ನಾಗಕನ್ಯೆಯಂತೆ ನರ್ತಿಸಲು ಪ್ರಾರಂಭಿಸಿದಳು. ಸ್ವಲ್ಪ ಕಾಲಾನಂತರ ಅವಳ ದೇಹದಿಂದ ನಾಗಕನ್ಯೆಯೊಬ್ಬಳು ಆಕ್ರಂದಿಸುತ್ತ ಹೊರಬಂದಳು ಬಂದವಳೇ ದೊರೆಯನ್ನು ಉದ್ದೇಶಿಸಿ, ``ರಾಜನ್, ನೀನು ಆಳುತ್ತಿರುವ ಈ ರಾಜ್ಯದಲ್ಲೇ ಬೇಡನೊಬ್ಬನು ನನ್ನ ಗಂಡನನ್ನು ಬಾಣ ಪ್ರಯೋಗ ಮಾಡಿ, ಕೊಂದು ನನ್ನನ್ನು ವಿಧವೆ ಯನ್ನಾಗಿಸಿದ. ನಾನು ಅವನ ಮೇಲೆ ನನ್ನ ಪ್ರತೀಕಾರ ತೆಗೆದುಕೊಳ್ಳ ಬಹುದಾಗಿತ್ತು. ಆದರವನು ಒಬ್ಬ ಯಃಕಶ್ಚಿತ್ ಬೇಡ. ನನ್ನ ಗಂಡನಾದರೋ ದೊರೆಗೆ ಸಮಾನನಾದವನು. ಆದ್ದರಿಂದ ಈ ಬೇಡನ ದೊರೆಗೆ ನನಗೆ ಉಂಟಾಗಿರುವಂಥ ದುಃಖವನ್ನೇ ಉಂಟುಮಾಡುತ್ತೇನೆ ಎಂದು ನಿನ್ನ ರಾಣಿಯನ್ನು ಕಚ್ಚಿದೆ,'' ಎಂದಳು.

``ಓ, ನಾಗದೇವತೆಯೇ, ಇದರಲ್ಲಿ ನನ್ನ ದೋಷವೇನು?''

``ನೀನಾಳುತ್ತಿರುವ ರಾಜ್ಯದಲ್ಲಿ ಬೇಡನೊಬ್ಬ ನನ್ನ ನಿರಪರಾಧಿ, ಮುಗ್ಧ ಗಂಡನನ್ನು ಕೊಂದದ್ದು.''

``ದೇವಿ, ನನಗೆ ಅದು ತಿಳಿಯದು. ಧರ್ಮರಾಜನಾದ ಯಮನು ಕೂಡ ಅರಿಯದೇ ಮಾಡಿದ ಪಾಪವನ್ನು ಕ್ಷಮಿಸುತ್ತಾನೆ. ನೀನು ನಿನ್ನ ಪತಿಯನ್ನು ಅತಿಶಯವಾಗಿ ಪ್ರೀತಿಸುವವಳು; ಅಚಂಚಲೆ. ಆದ್ದರಿಂದಲಾದರೂ ನನ್ನನ್ನು ನನ್ನ ಪ್ರೀತಿಯ ಸುಖದಿಂದ ವಂಚಿಸಬೇಡ.''

"ಆಯಿತು. ಒಪ್ಪಿದೆ. ಆದರೆ ಒಂದು ಷರತ್ತಿನ ಮೇಲೆ ಮಾತ್ರ."

"ಏನದು?, ಹೇಳು"

"ನಾನು ಆಕೆಯ ಮೈಯಿಂದ ಹೊರಟು ಹೋಗಿ ಅವಳನ್ನು ಮೊದಲಿನಂತೆ ಮಾಡುತ್ತೇನೆ. ಆದರೆ ಅದಕ್ಕೆ ಪ್ರತಿಯಾಗಿ ನೀನು ತಲೆದಂಡ ತೆರಬೇಕು."

ದೊರೆ ಸಂತೋಷದಿಂದ ಅದಕ್ಕೆ ಒಪ್ಪಿ ಖಡ್ಗದಿಂದ ತನ್ನ ಕತ್ತನ್ನು ತುಂಡರಿಸಿಕೊಳ್ಳಲು ಹೋದ. ಆಗ ನಾಗಕನ್ಯೆ ಅವನನ್ನು ತಡೆದು,

"ಅಯ್ಯಾ, ನಿನ್ನ ಅಚಂಚಲ ಪ್ರೇಮ ನನ್ನ ಮನಸ್ಸನ್ನು ಗೆದ್ದಿದೆ. ಇಗೋ, ನಾನು ಹೋದೆ. ನೀವು ಸುಖವಾಗಿರಿ" ಎಂದು ಮಾಯವಾದಳು

"ಒಬ್ಬಳ ಪ್ರೀತಿಗಾಗಿ ಸಾಗರ ಪರ್ಯಂತ ಹರಡಿರುವ ಸಾಮ್ರಾಜ್ಯವನ್ನೂ, ಯೌವನದ ಸುಖ ಸಂತೋಷಗಳನ್ನೂ ಧಾರೆ ಎರೆದು ಕೊಡಬಲ್ಲ ವ್ಯಕ್ತಿ ಮಹಾಶ್ರೇಷ್ಠ."

ನಾಗಕನ್ಯೆ ಹೊರಟುಹೋದ ಮರುಗಳಿಗೆಯಲ್ಲೇ ರಾಣಿ ರಾಹುವಿಮುಕ್ತ ಚಂದ್ರನಂತೆ ಕಂಗೊಳಿಸಿದಳು. ದೊರೆ ಆನಂದತುಂದಿಲನಾಗಿ ತನ್ನ ರಾಣಿ ಯೊಡನೆ ಅನೇಕ ವರ್ಷ ಸುಖವಾಗಿ ಬಾಳಿದ.

# ಒಬ್ಬ ಸಂತನ ಕತೆ

ಯಾರು ದ್ವೇಷ ಮತ್ತಿತರ ದುರ್ಗುಣಗಳನ್ನು ತ್ಯಜಿಸಿರುತ್ತಾರೋ, ಯಾರು ದಯೆ ಮತ್ತಿತರ ಒಳ್ಳೆಯ ಗುಣಗಳಿಂದ ಆವೃತರಾಗಿರುತ್ತಾರೋ, ಯಾರು ಐಹಿಕ ಪ್ರಪಂಚದ ಸುಖಕ್ಕೆ ವಿಮುಖರಾಗಿರುತ್ತಾರೋ ಅಂಥವರು ಸಂಸಾರ ಬಂಧನದಿಂದ ಬಿಡುಗಡೆ ಹೊಂದಿರುವ ಸಂತರು:

ಹಿಂದೆ ಕಾಶೀ ಪಟ್ಟಣದಲ್ಲಿ ವಾಮನ ಎಂಬ ಒಬ್ಬ ಅವಧೂತನಿದ್ದ. ಅವನು ವೇದವೇದಾಂತಗಳನ್ನೆಲ್ಲ ಕರಗತ ಮಾಡಿಕೊಂಡು ತನ್ನ ಗುರು ಹೇಳಿಕೊಟ್ಟ ಮಾರ್ಗದಲ್ಲೇ ಧ್ಯಾನ ಮಾಡುತ್ತ, ಇಂದ್ರಿಯಗಳೆಲ್ಲವನ್ನೂ ಜಯಿಸಿ, ಎಲ್ಲ ರಾಗದ್ವೇಷಗಳಿಂದ ಮುಕ್ತನಾಗಿ ಶತ್ರು-ಮಿತ್ರರಿಬ್ಬರನ್ನೂ ಸಮಾನ ದೃಷ್ಟಿಯಿಂದ ನೋಡಬಲ್ಲವನಾಗಿದ್ದ. ಲಾಭದಲ್ಲಿ ಅವನಿಗೆ ಸಂತೋಷವಿರಲಿಲ್ಲ; ನಷ್ಟದಲ್ಲಿ ದುಃಖವಿರಲಿಲ್ಲ. ಸಂತೋಷಕ್ಕೆ ಅವನ ಮನಸ್ಸು ಹಾರೈಸಲಿಲ್ಲ; ಸಂಕಟಕ್ಕೆ ಅವನು ಖೇದಪಡಲಿಲ್ಲ.

ಇವನ ಜೀವನವನ್ನು ಗಮನಿಸಿದ ಮಹಾವಿಷ್ಣು ತಾನೇ ಅಗೋಚರವಾಗಿ ಅಶರೀರವಾಣಿಯ ಮೂಲಕ ವಾಮನನನ್ನು ಅಭಿನಂದಿಸಿದ. ದೇವವಾಣಿಯನ್ನು ಕೇಳಿ ವಾಮನ ತುಂಬ ಹರ್ಷಪಟ್ಟ; ಆದರೆ ಅಭಿನಂದಿಸಿದ ಮಹಾವಿಷ್ಣುವನ್ನು ಸಾಕಾರ ರೂಪಿನಲ್ಲಿ ಕಾಣಬೇಕು ಎನ್ನುವ ಬಯಕೆ ಅವನಲ್ಲಿ ಅದಮ್ಯವಾಗಿ ಬೆಳೆದು, "ಮಹಾವಿಷ್ಣು, ನೀನು ಎಲ್ಲವನ್ನೂ ನೋಡುವವನು; ಸಹಸ್ರಾಕ್ಷನು ನೀನು. ನೀನೆ ಎಲ್ಲವೂ ಆಗಿದ್ದೀ. ನೀನು ನಿನ್ನ ಧ್ವನಿಯಿಂದ ನನ್ನನ್ನು ಪುನೀತಗೊಳಿಸಿದ್ದೀ. ನಿನ್ನನ್ನು ಕಾಣುವ ಒಂದು ಕೃಪೆಯನ್ನು ನನಗೆ ಮಾಡು," ಎಂದ.

"ಪೂಜ್ಯ ವಾಮನ, ನಾನು ನಿನಗೆ ಗೋಚರವಾಗುತ್ತೇನೆ. ಆದರದು ನಿನ್ನ ಮುಂದಿನ ಜನ್ಮದಲ್ಲಿ. ಯಾವಾಗ ನಿನ್ನ ಮನಸ್ಸು ಸಂಪೂರ್ಣವಾಗಿ ಸಂಸಾರ ಬಂಧನವನ್ನು ಕಳಚಿಕೊಳ್ಳುತ್ತದೋ ಆವಾಗ."

"ದೇವಾ, ನನಗೆ ಸಂತಾನದ, ಸಂಪತ್ತಿನ ದಿವ್ಯಲೋಕಗಳ ಆಸೆ ಯಾವುವೂ ಇಲ್ಲ. ಆಸೆಗಳೇ ಇಲ್ಲದ ನಾನು ಇನ್ಯಾವ ಬಂಧನದಿಂದ ಮುಕ್ತನಾಗಲಿ?"

"ಪೂಜ್ಯನೇ, ನಿನ್ನ ಇಂದ್ರಿಯಗಳಲ್ಲಿ ವಿಶ್ವಾಸವಿಡಬೇಡ. ಪ್ರಪಂಚ ಅವಕ್ಕೆ ಬಹಳ ಹತ್ತಿರದಲ್ಲಿರುತ್ತವೆ. ಈ ಪ್ರಪಂಚದ ವಸ್ತುಗಳ ಎದುರಿಗಿರುವಾಗಲೂ ವಿಚಲಿತನಾಗದವನು ಮಾತ್ರ ನಿಜವಾದ ವೈರಾಗಿ. ಇಂದಿನ ದಿನಗಳಲ್ಲಿ ಹಾಗಿರುವವನು ಒಬ್ಬನೇ. ಅವನ ಹೆಸರು ಕೃಷ್ಣ ಚೈತನ್ಯ. ಆತನೊಬ್ಬನೇ ಈ ಜನ್ಮದಲ್ಲೇ ನನ್ನನ್ನು ಸಾಕಾರ ರೂಪಿನಲ್ಲಿ ನೋಡಬಲ್ಲ. ನೀನು ಅವನಂತೆಯೇ ಆದಲ್ಲಿ ನೀನೂ ನನ್ನನ್ನು ನೋಡಬಹುದು."

'ಆಹಾ! ಇದು ಆಶ್ಚರ್ಯ!' ಅವಧೂತ ತನ್ನಲ್ಲಿಯೇ ಚಿಂತಿಸಿದ. 'ಐಹಿಕದ ಬಗ್ಗೆ ನನಗಿಂತ ಹೆಚ್ಚು ವೈರಾಗ್ಯ ತಾಳಿರುವ ಮನುಷ್ಯನೊಬ್ಬ ಇರುವುದು ಸಾಧ್ಯವೇ? ಇದ್ದ ಪಕ್ಷದಲ್ಲಿ ನಾನು ಹೋಗಿ ಆತನನ್ನು ಕಾಣಬೇಕು.'

ಹೀಗೆ ಯೋಚಿಸಿ, ಅವನು ದಂಡಕಾರಣ್ಯವನ್ನು ತಲುಪಿ, ಅಲ್ಲಿಯೇ ಊರೊಂದರ ಸಮೀಪದಲ್ಲಿದ್ದ ಶಿವಾಲಯದಲ್ಲಿ ಧ್ಯಾನಮಗ್ನನಾಗಿದ್ದ ಸಂತನನ್ನು ಕಂಡ. ಏಕಾಂತವಾಸಿಯಾಗಿದ್ದ ಈತ ಭಿಕ್ಷೆಗೆ ಹೋಗುತ್ತಿರಲಿಲ್ಲ; ಊರನ್ನು ಪ್ರವೇಶಿಸುತ್ತಲೇ ಇರಲಿಲ್ಲ. ಆದರೂ ಈತ ತನಗಿಂತ ದೊಡ್ಡ ವಿರಾಗಿಯೇ ಎನ್ನುವ ಅನುಮಾನ ಅವನಲ್ಲಿ ಬಂತು. 'ಆಯಿತು. ಒಬ್ಬನ ನಿಜಸ್ವಭಾವ ತುಂಬ ಕಾಲ ಪರೀಕ್ಷೆ ಮಾಡಿದ ನಂತರವೇ ತಿಳಿಯುವುದು. ನಾನಿಲ್ಲಿಯೇ ಇದ್ದು ಇವನನ್ನು ಗಮನಿಸುತ್ತೇನೆ,' ಎಂದುಕೊಂಡು ವಾಮನ ಅಲ್ಲಿಯೇ ಉಳಿದುಕೊಂಡ.

ಅದೇ ಸಮಯಕ್ಕೆ ದೀಪಾವಳಿ ಹಬ್ಬವೂ ಬಂತು. ಆ ಊರಿನ ದೊರೆ ಯಾರೋ ಒಬ್ಬ ಸ್ತ್ರೀಯಲ್ಲಿ ಮೋಹಿತನಾಗಿ ತನ್ನ ರಾಣಿಯನ್ನು ಉಪೇಕ್ಷೆ ಮಾಡಿದ್ದ. ಆಕೆಯಾದರೂ ಅಂತಹ ಪತಿವ್ರತೆಯಾಗಿರಲಿಲ್ಲ; ಜೊತೆಗೆ ಮತ್ಸರದ ಸ್ವಭಾವದವಳು. ತನ್ನ ಗಂಡನ ಅನಾದರಣೆಯಿಂದಲೂ, ಆ ಅನ್ಯಸ್ತ್ರೀಯ ಮೇಲಣ ಕೋಪದಿಂದಲೂ ಆಕೆ ತನ್ನ ಸಖಿಯನ್ನು ಕರೆದು, "ಗೆಳತಿ, ಮದನತಾಪ ಎಂಥ ಸಂಕಟವನ್ನು ಉಂಟುಮಾಡಬಲ್ಲುದು ಎನ್ನುವುದು ನನ್ನ ಸ್ವಾಮಿಗೆ ತಿಳಿದಿದೆ. ಬೇರೊಬ್ಬರು ಅದಕ್ಕೆ ಗುರಿಯಾದರೂ ಅದರ ಬಗ್ಗೆ ಅವನಿಗೆ ಚಿಂತೆಯೇ ಇಲ್ಲ. ತಾನು ವಿಚಿತ್ರ ಸ್ತ್ರೀಯರ ಬಳಿ ಹೋಗುತ್ತಾನೆ; ನನ್ನ ಬಗ್ಗೆ ಯೋಚಿಸುವುದೂ ಇಲ್ಲ. ಈ ಹಬ್ಬದ ರಾತ್ರಿಯೂ ನಾನು ಪುರುಷನ ಆಲಿಂಗನ ಸುಖವನ್ನು ಅನುಭವಿಸದಿದ್ದರೆ, ನನ್ನ ಯೌವನಕ್ಕೆ, ನನ್ನ ಬದುಕಿಗೆ ಏನು ಅರ್ಥ?"

"ಮಹಾರಾಣಿ, ನೀವು ಇದನ್ನು ನನಗೆ ಹಗಲು ಹೊತ್ತಿನಲ್ಲಿಯೇ ತಿಳಿಸಿದ್ದರೆ, ಯಾರಾದರೂ ರಸಿಕನನ್ನು ಅಂತಃಪುರಕ್ಕೆ ಬರಮಾಡಿಸುತ್ತಿದ್ದೆ. ಈಗ ರಾತ್ರಿ ಆಗಿದೆ. ಯುವಕರೆಲ್ಲ ತಮ್ಮ ತಮ್ಮ ಪ್ರೇಯಸಿಯರೊಂದಿಗೆ ಆಮೋದ ದಲ್ಲಿದ್ದಾರೆ. ಮತ್ತೆ, ಈ ಹೊತ್ತಿನಲ್ಲಿ ನಾನು ಹೊರಗಡೆ ಅಡ್ಡಾಡಿದರೂ ಕೆಟ್ಟ ಹೆಸರು ಬರುತ್ತದೆ; ಜೊತೆಗೆ ಯೋಗ್ಯನಾದವನು ಸಿಗುವುದೂ ಅಸಂಭವ. ಆದರೂ ನನಗೆ ಒಬ್ಬ ಗೊತ್ತು ಆತ ಯುವಕ, ಕುಲೀನ ಗುಣಗಳನ್ನು ಉಳ್ಳವನು. ಒಬ್ಬನೇ ವಾಸಿಸುತ್ತಾನೆ– ಆದರೆ ಆತ ವಿರಾಗಿ!"

"ಅವನು ಇರುವುದು ಎಲ್ಲಿ?"

"ಶಿವಾಲಯದಲ್ಲಿ"

"ನಡೆ, ನಾವು ಅಲ್ಲಿಗೆ ಶೀಘ್ರವಾಗಿ ಹೋಗೋಣ."

"ಆದರೆ ನಮ್ಮ ಭೇಟಿ ಫಲಪ್ರದವಾಗುವುದಿಲ್ಲ. ಅವನು ಯುವಕ, ಸುಂದರ ಆದರೆ ತನ್ನ ಇಂದ್ರಿಯಗಳನ್ನು ಜಯಿಸಿರುವ ವಿರಾಗಿ"

"ಸಖಿ, ಚಿಕ್ಕವನು, ಯುವಕ ಎನ್ನುತ್ತೀ. ಅಂಥವನು ಮನ್ಮಥನ ಆಳಾಗದೇ ಇದ್ದಾನೆಯೇ? ನನಗೆ ತಿಳಿದಿರುವಂತೆ ಮನ್ಮಥನನ್ನು ಗೆದ್ದಿರುವ ಒಬ್ಬನೇ ಒಬ್ಬ ನೆಂದರೆ ಈಶ್ವರ; ಅವನು ತನ್ನ ದೇಹದ ಅರ್ಧಭಾಗವನ್ನು ಅವನ ಹೆಂಡತಿಗೆ ಒಪ್ಪಿಸಿದ್ದಾನೆ. ಹಾಗೆ ಒಪ್ಪಿಸಿಯೇ ಆತ ಗಣೇಶನ ತಂದೆಯಾಗಲಿಲ್ಲವೇ?"

"ಮಹಾರಾಣಿ, ನೀವು ಹೇಳುವುದು ನಿಜ ಅನ್ನಿಸುತ್ತದೆ. ಮನ್ಮಥ ಇನ್ನೂ ಬದುಕಿದ್ದಾನೆ. ಇರುಳ ಹೊತ್ತಿನಲ್ಲಿ, ಏಕಾಂತದಲ್ಲಿ, ನಿನ್ನಂಥಹ ಲಾವಣ್ಯವತಿ ಅವನ ಮುಂದೆ ನಿಂತರೆ ಆತನಾದರೂ ನಿನ್ನಿಂದ ಹೇಗೆ ವಿಮುಖನಾದಾನು. ಒಂದೇ ಸಂಗತಿ ಎಂದರೆ ಆತ ಏನೂ ಗತಿಯಿಲ್ಲದವನು. ಮಾನ ಮುಚ್ಚಿಕೊಳ್ಳು ವುದಕ್ಕೆ ಸಾಕಷ್ಟು ಬಟ್ಟೆ ಮಾತ್ರ ಅವನ ಬಳಿ ಇರುವುದು. ಆದ್ದರಿಂದ ನಾವು ಉತ್ತಮವಾದ ವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಒಯ್ಯಬಹುದು. ದಾರಿದ್ರ್ಯದಲ್ಲಿ ಇರುವವರು ಇವನ್ನೇ ಅಲ್ಲವೇ ಅಪೇಕ್ಷಿಸುವುದು."

ರಾಣಿ ಒಪ್ಪಿದಳು. ಅವರು ಅಮೂಲ್ಯ ವಸ್ತ್ರಾಭರಣಗಳನ್ನು ಪೂಜೆಯ ನೆವದಲ್ಲಿ ಹೂ ಗಂಧ ತಾಂಬೂಲಾದಿಗಳನ್ನು ತೆಗೆದುಕೊಂಡು, ಶಿವಾಲಯದತ್ತ ಹೊರಟರು. ರಾಣಿ ತನಗೆ ದೊರೆಯಬಹುದಾದ ಸುಖವನ್ನು ನೆನಸುತ್ತ ಬೇಗ ಬೇಗ ನಡೆದು ದೇವಸ್ಥಾನವನ್ನು ತಲುಪಿದಳು. ನಿಜ, ಅಲ್ಲಿ ಶಿವನ ಮುಂದೆ ಸುಂದರ ಯುವಕನೊಬ್ಬ ಕೂತಿದ್ದ. ಆ ಯುವಕ ಇನ್ನು ಯಾರೂ ಅಲ್ಲದೆ ಕೃಷ್ಣ

ಚೈತನ್ಯನೇ ಆಗಿದ್ದ. ದೇವರಿಗೆ ಪೂಜೆ ಮಾಡುವ ನೆವದಲ್ಲಿ ರಾಣಿ ಮುಂದೆ ಹೋಗಿ, ಆ ಯುವಕನ ಮುಂದೆ ಶೃಂಗಾರ ಹಾವಭಾವಗಳಿಂದ, ಉದ್ರೇಕ ಗೊಳಿಸುವ ಅಂಗಾಂಗಗಳ ಚಲನೆಯಿಂದ ಅವನನ್ನು ಧ್ಯಾನವಿಮುಖ ನನ್ನಾಗಿಸಲು ಯತ್ನಿಸಿದಳು. ತನ್ನ ಕಾಲಗೆಜ್ಜೆಯಿಂದ ಕಿಂಕಿಣಿ ನಾದ ಹೊಮ್ಮಿಸಿ ದಳು; ಬಳ್ಳಿಯಂತಿದ್ದ ತನ್ನ ತೋಳುಗಳನ್ನು ಬಳುಕಿಸಿ, ಇಳಿಬಿದ್ದು, ಸುಗಂಧ ವನ್ನು ಚೆಲ್ಲುತ್ತಿದ್ದ ತನ್ನ ಕೇಶರಾಶಿಯನ್ನು ಒಯ್ಯಾರದಿಂದ ಅವನ ಹತ್ತಿರ ಒಯ್ದಳು ಇಷ್ಟಾದರೂ ಯುವಕನ ಹೃದಯವನ್ನು ಮದನ ಹೊಗಲಿಲ್ಲ.

"ಮಹಾರಾಣಿ, ನಿಮ್ಮ ವರ್ತನೆಯಿಂದ ಅವನು ಚಲಿತನಾಗಲಿಲ್ಲ ನಾನೇ ಅವನನ್ನು ನೇರವಾಗಿ ಕೇಳುವುದು ಒಳ್ಳೆಯದಲ್ಲವೇ"

ರಾಣಿ ಒಪ್ಪಿಗೆ ಸೂಚಿಸಿದಾಗ ಸಖಿ, "ಸ್ವಾಮಿ, ಏಕಾಂತದಲ್ಲಿ ಒಬ್ಬಳೇ, ಈ ಯುವತಿ ನಿಮ್ಮನ್ನು ಹುಡುಕಿಕೊಂಡು ಬಂದಿದ್ದಾಳೆ. ಅವಳನ್ನು ನೀವು ಸ್ವಾಗತಿ ಸುವುದಿಲ್ಲವೇ? ಹೃದಯ ವ್ಯಾಪಾರದಲ್ಲಿ ಸ್ತ್ರೀ ತನ್ನ ಮನೋಭಿಲಾಷೆಯನ್ನು ವ್ಯಕ್ತಪಡಿಸುತ್ತಾಳೆ. ಮಿಕ್ಕುದನ್ನು ಬುದ್ಧಿವಂತನಾದ ಪುರುಷ ತಿಳಿದುಕೊಂಡು ಆಕೆಯನ್ನು ಸರಿಯಾಗಿ ನಡೆಸಿಕೊಳ್ಳಬೇಕಲ್ಲವೇ," ಎಂದು ಅವನ ಮುಂದೆ ತಾನು ತಂದಿದ್ದ ಬಹು ಬೆಲೆಬಾಳುವ ವಸ್ತ್ರಗಳನ್ನೂ ಆಭರಣಗಳನ್ನೂ ಇರಿಸಿ, ತಾನು ದೇವಾಲಯದ ಹೊರಗೆ ಹೋದಳು ಸ್ವಲ್ಪ ಕಾದು ನಂತರ ಬಂದು ನೋಡಿದಾಗ ಆ ಯುವಕ ಇನ್ನೂ ಧ್ಯಾನಾಸಕ್ತನಾಗಿಯೇ ಇದ್ದ. ಆಗ ಸಖಿ, "ಅಯ್ಯಾ, ನಿನ್ನಲ್ಲಿ ರಾಗ ಹುಟ್ಟದಿರಬಹುದು. ಆದರೆ ಹೆಣ್ಣಿನ ಬಗ್ಗೆ ಕನಿಕರವೂ ಇಲ್ಲವೇ? ನೋಡು, ಮದನ ತಾಪದಿಂದ ಈಕೆ ಹೇಗೆ ಬಳಲಿ ಹೋಗಿದ್ದಾಳೆ. ಅದರ ಶಮನಕ್ಕೆಂದೇ ಆಕೆ ನಿನ್ನನ್ನು ಅರಸಿಕೊಂಡು ಬಂದಿದ್ದಾಳೆ. ಹೀಗಿದ್ದೂ ನೀನು ಏಕೆ ಹೀಗೆ ನಿರ್ದಯನಾಗಿದ್ದೀ," ಎಂದಳು.

ಆಗ ಸಂತ, "ಮಧುರ ಭಾಷಿಣಿ, ನೀನು ನನ್ನಿಂದ ಏನು ಬಯಸಿದ್ದೀ? ನನ್ನ ಮನಸ್ಸು ಬಂಡೆಯಂತಾಗಿದೆ; ಮರದಷ್ಟು ಗಟ್ಟಿಯಾಗಿದೆ. ಹೆಂಗಸರೊಡನೆ ಧನಕನಕದೊಂದಿಗೆ ನನ್ನ ಸಂಬಂಧವೇ ಇಲ್ಲ. ನಿನ್ನ ಒಡತಿ ಮದನ ತಾಪಕ್ಕೆ ಗುರಿಯಾಗಿದ್ದರೆ ಆಕೆ ಬೇರೆ ಇನ್ನಾರನ್ನಾದರೂ ಹುಡುಕಿಕೊಂಡು ಹೋಗುವುದು ಒಳ್ಳೆಯದು.

ನನ್ನ ದೃಷ್ಟಿಯಲ್ಲಿ ಬಂಗಾರವೂ ಮಣ್ಣೂ ಎರಡೂ ಒಂದೇ. ಎಲ್ಲ ಸ್ತ್ರೀಯರೂ ನನ್ನ ದೃಷ್ಟಿಯಲ್ಲಿ ನನ್ನ ತಾಯಂದಿರೇ. ಎಲ್ಲ ಜೀವಿಗಳೂ ನನ್ನ ಸ್ನೇಹಿತರೇ."

ಇದನ್ನೆಲ್ಲ ನಿಂತು ನೋಡಿದ ವಾಮನ ಆಶ್ಚರ್ಯಭರಿತನಾದ; ಮೂಕನಾದ. ನಂತರ ತನ್ನಲ್ಲೇ,

"ಎಂಥ ದಡ್ಡ! ಏಕಾಂತದಲ್ಲಿ ಇಂಥ ಸುಂದರಿ ಎದುರಿಗೆ ಬಂದು ಯಾಚಿಸಿದರೂ ಅವಳಿಗೆ ಓಗೊಡುತ್ತಿಲ್ಲವಲ್ಲ! ಎಂಥ ಲಾವಣ್ಯವತಿ ಈಕೆ! ಎಲ್ಲ ಬಯಕೆಗಳನ್ನೂ ಸಂತೋಷದಲ್ಲಿ ಮುಳುಗಿಸುವ ದೇವಿಯ ಹಾಗಿದ್ದಾಳೆ. ಈ ಚಿಗುರೆಗಂಗಳ ಯುವತಿಯನ್ನು ಇವನು ತಿರಸ್ಕರಿಸುತ್ತಿದ್ದಾನಲ್ಲ! ಯಾವ ತಪದಿಂದ ಇದಕ್ಕಿಂತ ಹೆಚ್ಚಿನ ಯಾವ ಸುಖವನ್ನು ಯಾರು ಪಡೆಯಬಲ್ಲರು? ಇದಕ್ಕಿಂತ ಹೆಚ್ಚಿನ ಸುಖದ ಫಲ ಯಾವುದು ಇರಬಹುದು?" ಎಂದು ಯೋಚಿಸಿ 'ನಾನೇ ಈಕೆಯನ್ನು ಒಲಿಸಿಕೊಳ್ಳುತ್ತೇನೆ' ಎಂದು ಅವಳತ್ತ ಹೆಜ್ಜೆ ಇಟ್ಟ. ಕೂಡಲೆ ವಿಷ್ಣುವಿನ ಅಶರೀರವಾಣಿ "ನಾನು ಇದನ್ನೇ ಅಲ್ಲವೆ ಹೇಳಿದ್ದು? ಇಂದ್ರಿಯಗಳು ಪ್ರಪಂಚಕ್ಕೆ ಬಹು ಹತ್ತಿರದಲ್ಲಿ ಇಲ್ಲವೇ? ಅದರಲ್ಲಿ ವಿಶ್ವಾಸ ಬೇಡ ಎಂದು ನಾನು ತಿಳಿಸಲಿಲ್ಲವಾ," ಅವನ ಕಿವಿಯನ್ನು ತಾಕಿತು. ವಾಮನ ನಾಚಿಕೆಯಿಂದ ಕುಗ್ಗಿ ಹೋದ. 'ನಿಜ, ಬರಿಯ ಜ್ಞಾನ ಮುಕ್ತಿಯನ್ನೆಂದೂ ತಾರದು; ಪ್ರಪಂಚವನ್ನು ಸಂಪೂರ್ಣವಾಗಿ ತೊರೆದಲ್ಲದೆ ಮೋಕ್ಷ ಸಿಗದು' ಎನ್ನುವ ತಿಳುವಳಿಕೆಯಲ್ಲಿ ವಾಪಸ್ಸಾದ.

# ಪರಿಪೂರ್ಣತೆಯನ್ನು ಪಡೆದವನ ಕತೆ

ಹಿಂದೆ ಉಜ್ಜಯಿನಿಯಲ್ಲಿ ಮೂರು ಜನ ರಾಜಕುಮಾರರಿದ್ದರು. ಮೂರು ಜನರೂ ಒಬ್ಬಳೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರು. ಇವರಲ್ಲಿ ಹಿರಿಯನಾಗಿದ್ದವನು ಭರ್ತೃಹರಿ; ಅವನ ತಮ್ಮಂದಿರು ಶಕ ಮತ್ತು ವಿಕ್ರಮಾದಿತ್ಯ. ಪೂರ್ವಜನ್ಮ ಪುಣ್ಯಫಲದಿಂದ ಭರ್ತೃಹರಿಯಲ್ಲಿ ಯಾವ ದುರ್ಗುಣಗಳು ಇರಲಿಲ್ಲ. ಸದಾ ಶಾಂತಚಿತ್ತನು ಮೃದು ಹೃದಯದವನು ಆದ ಈತನಿಗೆ ಪ್ರಾಪಂಚಿಕ ಬಂಧನವೇ ಇರಲಿಲ್ಲ. ಕಾಲಕ್ರಮದಲ್ಲಿ, ತಂದೆಯ ಮರಣಾನಂತರ, ತನಗೆ ರಾಜ್ಯಾಧಿಕಾರದ ಇಚ್ಛೆ ಇರದಿದ್ದರೂ ಸಚಿವರುಗಳ ಒತ್ತಾಯದಿಂದ, ಭರ್ತೃಹರಿ ಸಿಂಹಾಸನವನ್ನು ಅಲಂಕರಿಸಿದ. ತಾನು ರಾಜಕುಲದಲ್ಲಿ ಹುಟ್ಟಿದ್ದರಿಂದಲೂ ತಾನೇ ಹಿರಿಯನಾದ್ದರಿಂದಲೂ ಇದು ತನ್ನ ಕರ್ತವ್ಯ ಎನ್ನುವುದರ ಅರಿವೂ ಅವನಿಗಿತ್ತು.

ದೊರೆಯಾದ ನಂತರ ಅವನು ತನ್ನ ಸಚಿವರುಗಳನ್ನು ಕರೆಸಿ, "ಮಂತ್ರಿ ವರ್ಯರೇ, ರಾಜನಾದವನು ರಾಜಭೋಗಗಳನ್ನು ಅನುಭವಿಸಬೇಕು. ಆದರೆ ಈ ಭೋಗಗಳು ಯಾವಾಗ ಸಂತೋಷವನ್ನು ಉಂಟುಮಾಡುತ್ತವೆ ಎಂದರೆ ಅವು ಎಂದೂ ಅನುಭವಿಸಿದ ಭೋಗಗಳಾದಾಗ ಮಾತ್ರ. ಒಮ್ಮೆ ಭೋಗಿಸಿದ್ದು ಇನ್ನೊಮ್ಮೆ ಸುಖ ನೀಡಲಾರದು. ಆದ್ದರಿಂದ ಒಮ್ಮೆ ಸವಿದಿದ್ದನ್ನು ನನಗೆ ಮತ್ತೆ ನೀಡಬೇಡಿ," ಎಂದನು.

ಒಂದು ವರ್ಷ ಕಾಲ ಭರ್ತೃಹರಿ ರಾಜ್ಯಾಡಳಿತವನ್ನು ನಡೆಸಿದ; ನ್ಯಾಯ ವಿತರಣೆ ಮಾಡಿದ; ತನ್ನ ಎದುರಾಳಿಗಳನ್ನು ಜಯಿಸಿದ; ತನ್ನ ಪ್ರಜೆಗಳನ್ನು ಅನುರಾಗದಿಂದ ಪಾಲಿಸಿದ. ಒಂದು ವರ್ಷದ ನಂತರ, ಅವನ ಸಚಿವರುಗಳು ಬಂದು, "ರಾಜನ್, ಒಮ್ಮೆ ಸವಿದದ್ದನ್ನು ನನಗೆ ಮತ್ತೆ ನೀಡಬೇಡಿ ಎಂದು ಅಪ್ಪಣೆ ಮಾಡಿದ್ದೀರಿ. ಈ ಒಂದು ವರ್ಷದಲ್ಲಿ ನೀವು ಎಲ್ಲ ತರದ ಸವಿಯನ್ನೂ ಉಂಡಿದ್ದೀರಿ. ಮುಂದೆ ಇವುಗಳದೇ ಪುನರಾವರ್ತನೆಯಾಗುತ್ತದೆ. ಆದ್ದರಿಂದ ಈಗ ನಿಮ್ಮ ಅಪ್ಪಣೆ ಏನು? ನಮಗೆ ಹೇಳಬೇಕು," ಎಂದರು.

ಆಗ ಭರ್ತೃಹರಿ, "ಸವಿದ ಸಿಹಿಯನ್ನೇ ಮತ್ತೆ ಸವಿಯುವುದು ಅನಿವಾರ್ಯವಾದರೆ ಮನುಷ್ಯನ ಭೋಗಕ್ಕೆ ಕೊನೆಯೇ ಇಲ್ಲ; ಅವನೆಂದೂ ತೃಪ್ತನೂ ಆಗುವುದಿಲ್ಲ". ಹಿರಿಯರು ಹೇಳುವಂತೆ: 'ಒಬ್ಬ ಮನುಷ್ಯ ಒಂದು ವರ್ಷ ಕಾಲ ಬದುಕಿದ್ದು, ತನ್ನ ಎಲ್ಲ ಬಯಕೆಗಳನ್ನೂ ಈಡೇರಿಸಿಕೊಂಡರೆ, ಮತ್ತೆ ಅಂಥದೇ ವರ್ಷಗಳನ್ನು ಬದುಕಿರುವುದು ಅರ್ಥವಿಲ್ಲದ್ದು. ಯಾವುದನ್ನು ಎಷ್ಟು ಭೋಗಿಸಿದರೂ ಮನುಷ್ಯ ತೃಪ್ತನಾಗದಿದ್ದರೆ, ಅವನು ಆಶೆಬುರುಕನಾಗಿ, ವ್ಯಾಧಿಪೀಡಿತನಾಗುವುದು ನಿಶ್ಚಯ.'

ಇಷ್ಟು ಹೇಳಿ ಭರ್ತೃಹರಿ ತನ್ನ ಸಿಂಹಾಸನವನ್ನೂ, ರಾಜ್ಯವನ್ನೂ, ರಾಜ ಭೋಗಗಳನ್ನೂ ತ್ಯಜಿಸಿ, ತನ್ನ ತಮ್ಮ ಶಕನ ಪಟ್ಟಾಭಿಷೇಕವನ್ನು ನೆರವೇರಿಸಿ, ತಾನು ತಪಸ್ಸಿನಲ್ಲಿ ಕಾಲ ಕಳೆಯುವುದಾಗಿ ಹೇಳಿ ಅರಣ್ಯಕ್ಕೆ ಹೊರಟು ಹೋದ. ಅಲ್ಲಿ ಪದ್ಮಾಸನದಲ್ಲಿ ಕೂತು, ಮನಸ್ಸನ್ನು ಕೇಂದ್ರೀಕರಿಸಿ, ಷಟ್ಚಕ್ರಗಳನ್ನು ದಾಟಿ, ಸಹಸ್ರಾರ – ಕಮಲವನ್ನು ತನ್ನ ಜಾಗೃತ ಕುಂಡಲಿನೀ ಶಕ್ತಿಯಿಂದ ತಲುಪಿ, ಪರಮಾತ್ಮನ ಧ್ಯಾನದಲ್ಲಿ ತಲ್ಲೀನನಾದ.

ಒಂದು ಸಾರಿ ಅವನ ಧ್ಯಾನಕ್ಕೆ ಏನೋ ಅಡ್ಡಿ ಒದಗಿದಾಗ ತಾನು ಉಟ್ಟಿದ್ದ ನಾರುಮಡಿ ಹರಿದು ಹೋಗಿದ್ದುದನ್ನು ಗಮನಿಸಿ, ಬೊಂಬಿನ ಚೂರೊಂದನ್ನು ಸೂಜಿಯಾಗಿ ಮಾಡಿಕೊಂಡು ಅದನ್ನು ಹೊಲಿಯ ತೊಡಗಿದ. ಭರ್ತೃಹರಿ ಸಮಾಧಿಸ್ಥಿತಿಯಿಂದ ಹೊರಬಂದಿರುವುದನ್ನು ಅರಿತ ಶ್ರೀ ವಿಷ್ಣು ಅವನ ಬಳಿ ಬಂದು, "ಭರ್ತೃಹರಿ, ನೀನು ನನ್ನ ಪರಮಭಕ್ತ. ನಾನು ನಿನ್ನ ಭಕ್ತಿಯಿಂದ ಸುಪ್ರೀತನಾಗಿದ್ದೇನೆ. ಆದ್ದರಿಂದ ಯಾವ ವರ ಬೇಕೋ ಕೇಳು," ಎಂದ.

ಆಗ ಭರ್ತೃಹರಿ, "ನನಗೆ ಯಾವ ಪ್ರಾಪಂಚಿಕ ಭೋಗದ ಆಸೆಯೂ ಉಳಿದಿಲ್ಲ ಅನೇಕ ವರ್ಷ ಪರ್ಯಂತ ಇರುವುದೂ ನನಗೆ ಬೇಕಿಲ್ಲ. ಸ್ವರ್ಗವಾಗಲಿ, ಅಪ್ಸರೆಯರಾಗಲಿ, ಇಂದ್ರನ ಸಿಂಹಾಸನವಾಗಲಿ – ಈ ಯಾವುದನ್ನೂ ನಾನು ಆಸೆ ಪಟ್ಟಿಲ್ಲ. ಎಲ್ಲ ಆಸೆಯನ್ನೂ ಬಿಟ್ಟಿರುವ ನಾನು ಏನನ್ನು ಬೇಡಲಿ? ಬೇಡಿಕೆಯನ್ನೇ ಬಿಟ್ಟಿರುವ ನಾನು ಏನನ್ನು ಬೇಡುವುದು ಸಾಧ್ಯ. ನೀನು ವಿಶ್ವದೊಡೆಯ. ಹಾಗಾಗಿ, ನೀನು ವರ ಕೊಡುವುದಾಗಿದ್ದರೆ, ಒಂದು ಕೇಳುತ್ತೇನೆ," ಎಂದ.

"ಭರ್ತೃಹರಿ, ನೀನು ನಿಜವಾಗಿ ಎಲ್ಲ ಆಸೆಗಳಿಂದ ಮುಕ್ತನಾಗಿದ್ದಿ. ಆದರೀಗ ನಾನು, ಮೂರು ಲೋಕದ ಒಡೆಯ, ಬಂದಿದ್ದೇನೆ. ನೀನು

ಏನನ್ನಾದರೂ ಕೇಳಬೇಕು, ಕೇಳು. ನೀನು ಕೇಳಿದ್ದನ್ನು ಕೊಡಲು ನನಗೆ ಸಂತೋಷವಾಗುತ್ತದೆ."

"ಪ್ರಭೂ, ನಿನಗೆ ಅವಿಧೇಯನಾಗಿರಲು ನಾನು ಇಚ್ಛಿಸುವುದಿಲ್ಲ. ಹಾಗಾಗಿ ಕೇಳುತ್ತೇನೆ. ನೀನು ನೋಡುತ್ತಾ ಇದ್ದೀಯ. ನಾನು ಹರಿದು ಹೋಗಿರುವ ಈ ನಾರುಮಡಿಯನ್ನು ಹೊಲಿಯಲು ಯತ್ನಿಸುತ್ತಿದ್ದೇನೆ. ಆದ್ದರಿಂದ ದಾರ ಶೀಘ್ರವಾಗಿ ಸೂಜಿಯ ಕಣ್ಣೊಳಗೆ ಹೋಗುವಂತೆ ಮಾಡು."

"ವತ್ಸ, ಬಾ. ನಾನು ಸುಪ್ರೀತನಾದೆ ಈಗಲೇ ನೀನು ನನ್ನ ಬೆಳಕಲ್ಲಿ ಐಕ್ಯವಾಗು," ಎಂದು ಶ್ರೀ ವಿಷ್ಣು ಭರ್ತೃಹರಿಯನ್ನು ಕರೆದುಕೊಂಡ. ಭರ್ತೃಹರಿ ಒಂದೇ ಕ್ಷಣದಲ್ಲಿ ಮೋಕ್ಷವನ್ನು ಪಡೆದು ಸಾಯುಜ್ಯಲೋಕ ಪ್ರವೇಶಿಸಿದ

# ಮಂಗಳ

ಯಾರ ತಾತ, ರಾಜ ಭವಸಿಂಹದೇವ, ವಾಗ್ವತೀ ನದೀ ತೀರದಲ್ಲಿ ಶಿವಸನ್ನಿಧಿಯಲ್ಲಿ ತನ್ನ ಮೃಣ್ಮಯ ಶರೀರವನ್ನು ತ್ಯಜಿಸಿ, ಸ್ವರ್ಗಾರೋಹಣ ಮಾಡಿದನೋ,

ಯಾರ ತಂದೆ, ದೇವಸಿಂಹ, ಖ್ಯಾತ ರಣದುರಂಧರನೂ, ಗುಣಶೀಲನೂ, ಸಕ್ಕುರೀಪುರದಲ್ಲಿ ಸರೋವರವನ್ನು ನಿರ್ಮಾಣಮಾಡಿಸಿದವನೂ, ಮಹಾದಾನಿಯೂ ಆಗಿದ್ದನೋ,

ಅವರುಗಳ ಪುತ್ರ, ಧೀರನೂ, ಪಂಡಿತಮಾನ್ಯನೂ ಆದ ಮಹಾರಾಜ ಶಿವಸಿಂಹನ ಆಜ್ಞಾನುಸಾರ ಈ ರಾಜನೀತಿಯ ಗ್ರಂಥಿ ಗ್ರಂಥವನ್ನು ವಿದ್ಯಾಪತಿ ರಚಿಸಿದ.

## ಹಿನ್ನುಡಿ

# ವಿದ್ಯಾಪತಿ : ಸಾಂಪ್ರದಾಯಿಕ ಪ್ರತಿಭೆಯ ಸ್ವರೂಪ

**ಡಿ. ಆರ್. ನಾಗರಾಜ್**

೧

ಭಾರತೀಯ ಕವಿಗಳಲ್ಲಿ ವಿದ್ಯಾಪತಿ ವಿಶಿಷ್ಟರ ಸಾಲಿಗೆ ಸೇರಿದವನು. ಈತನ ಪ್ರತಿಭೆಯ ಬಗ್ಗೂ ಸಂದೇಹ ಬೇಡ. ಈತ ಸಂಪ್ರದಾಯಶರಣ ಎಂಬ ಬಗ್ಗೂ ಸಂದೇಹ ಬೇಡ. ವಿದ್ಯಾಪತಿಯ ಜೀವನದರ್ಶನ ಮತ್ತು ಕುಮಾರವ್ಯಾಸನ ಜೀವನದರ್ಶನಗಳ ನಡುವೆ ಅನೇಕ ಸಾಮ್ಯಗಳಿವೆ. ಇಬ್ಬರೂ ಕೃಷ್ಣಭಕ್ತರು. ಹಾಗೆಯೇ ವರ್ಣಾಶ್ರಮ ಧರ್ಮದ ಬಗೆಗೆ ಪರಮನಿಷ್ಠೆ ಇಟ್ಟವರು. ವಿದ್ಯಾಪತಿಯನ್ನು ಓದುತ್ತಿದ್ದಂತೆ ಕುಮಾರವ್ಯಾಸ ಮತ್ತೆ ಮತ್ತೆ ನೆನಪಾಗುತ್ತಿದ್ದ. ಆದರೆ, ಈತ ಕುಮಾರವ್ಯಾಸನಿಗಿಂತ ಭಿನ್ನನೂ ಹೌದು. ಹೀಗಾಗಿ, ಮಧ್ಯಯುಗೀನ "ಸವರ್ಣೀಯ ಸಂವೇದನೆ"ಯ ಒಂದು ಪ್ರಾತಿನಿಧಿಕ ಪ್ರತಿಭೆಯನ್ನಾಗಿ ವಿದ್ಯಾಪತಿಯನ್ನು ಸ್ವೀಕರಿಸಿ ಮಹತ್ವದ ಚರ್ಚೆಯನ್ನು ನಡೆಸಲು ಸಾಧ್ಯವಿದೆ. ಸವರ್ಣೀಯ ಸಂವೇದನೆ ಎಂಬ ಪದವನ್ನು ಬ್ರಾಹ್ಮಣ ಸಂವೇದನೆ ಎಂದು ಭಾಷಾಂತರಿಸುವುದು ತಪ್ಪಾಗುತ್ತದೆ. ಕಾರಣ, ಈ ಚೌಕಟ್ಟಿನಲ್ಲಿ ಅನೇಕ ಅಬ್ರಾಹ್ಮಣರೂ ಸೇರುತ್ತಾರೆ ಈ ಅಂಶ ನಾನು ಮುಂದೆ ಪ್ರಸ್ತಾಪಿಸಲಿರುವ ಕೃತಿಗಳ ಮೂಲಕ ಸ್ಪಷ್ಟವಾಗುತ್ತದೆ.

೧೪–೧೫ನೇ ಶತಮಾನಗಳು ಮತ್ತು ನಂತರದಲ್ಲಿ ವೈದಿಕ ಸಾಂಪ್ರದಾಯಕತೆ ತುಂಬ ತೀವ್ರವಾಗಿತ್ತು ಎಂದ ಮಾತ್ರಕ್ಕೆ ಅದಕ್ಕೆ ಸವಾಲುಗಳೇ ಇರಲಿಲ್ಲ ಎಂದಲ್ಲ. ಅದು ಎದುರಿಸುತ್ತಿದ್ದ ಸವಾಲುಗಳ ಕಾರಣಕ್ಕಾಗಿಯೇ ವೈದಿಕ ಸಂಪ್ರದಾಯಶರಣತೆ ಹೆಚ್ಚು ಬಿಗಿಯಾಗತೊಡಗಿತ್ತು; ನಿಷ್ಠುರವಾಗತೊಡಗಿತ್ತು. ತಂತ್ರ, ಬೌದ್ಧ, ಜೈನ, ಜಾನಪದ, ಆದಿವಾಸಿ, ಅ–ವೈದಿಕ ದರ್ಶನಗಳ ಹೊಡೆತ ಒಂದು ರೀತಿಯ ಗೆರಿಲ್ಲಾ ಯುದ್ಧವಾಗಿ ಮಾರ್ಪಟ್ಟಿತ್ತು. ಜತೆಗೆ ಹೊಸದಾಗಿ ಸೇರಿದ ಇಸ್ಲಾಮಿನ ಸವಾಲು ಬೇರೆ. ಈ ಪರಂಪರೆಗಳು ತೀವ್ರವಾದಷ್ಟೂ ವರ್ಣಾಶ್ರಮಧರ್ಮಕ್ಕೆ ಕೊಡಲಿ ಏಟು ಬೀಳುತ್ತಿತ್ತು. ಅನೇಕ ಸಂಕೀರ್ಣ

ಕಾರಣಗಳಿಗಾಗಿ ವೈದಿಕ ಧರ್ಮದ ಏಕಮಾತ್ರ ಗುರಿ ವರ್ಣಾಶ್ರಮಧರ್ಮದ ಸಮರ್ಥನೆ ಎಂಬಂತಾಗಿತ್ತು. ಭಾರತೀಯ ಸಂಸ್ಕೃತಿ ವಿಸ್ತಾರದ 'ಪ್ರಧಾನಧಾರೆ' ದೊಡ್ಡದಾಗಿ ಬೆಳೆದಷ್ಟೂ ಟೊಳ್ಳಾಗತೊಡಗಿತ್ತು. ಇಂಥ ಕಡು ಸಂಪ್ರದಾಯಸ್ಥ ಚೌಕಟ್ಟಿನಲ್ಲಿ ಬರೆದ ಕವಿಗಳು ಅನೇಕ ರೀತಿಯ ಸೈದ್ಧಾಂತಿಕ ಒತ್ತಡಗಳನ್ನು ಎದುರಿಸಬೇಕಿತ್ತು. ವೈದಿಕ ಚೌಕಟ್ಟಿನೊಳಗೆ ಬರೆಯುವುದು ಎಂದರೇನೇ ಸಂಪ್ರದಾಯ ಶರಣರಾಗುವುದು ಎಂಬ ಪರಿಸ್ಥಿತಿ. ಅದನ್ನು ದಾಟುವುದಕ್ಕೆ ಬೇರೆ ಬೇರೆ ರೀತಿಯ ತಂತ್ರ-ಹುನ್ನಾರಗಳನ್ನು ಸವರ್ಣೀಯ ಸಂವೇದನೆಯ ಕವಿಗಳು ರೂಪಿಸಿಕೊಂಡರು. ಈ ಪ್ರಯತ್ನದ ಸಫಲತೆ-ವಿಫಲತೆಗಳನ್ನು ವಿದ್ಯಾಪತಿ ಯನ್ನು ಕೇಂದ್ರದಲ್ಲಿರಿಸಿಕೊಂಡು ಚರ್ಚಿಸುವುದು ಈ ಟಿಪ್ಪಣಿಯ ಉದ್ದೇಶ.

## ೨

ಭಾರತೀಯ ಸಾಹಿತ್ಯೇತಿಹಾಸದ ವ್ಯಂಗ್ಯ! ಕೃಷ್ಣ ದಟ್ಟ ಸಾಂಪ್ರದಾಯಕ ರಿಗೂ ಸಂಕೇತವಾದ, ವಿದ್ರೋಹಿಗಳಿಗೂ ಸಂಕೇತವಾದ ಪ್ರಾಚೀನ-ಮಧ್ಯಯುಗೀನ ಸಾಹಿತ್ಯಗಳಲ್ಲಿ ಕೃಷ್ಣ ಪಾತ್ರಸಂಕೇತ ಕವಲೊಡೆದ ರೀತಿ ನಿಜಕ್ಕೂ ರೋಮಾಂಚಕಾರಿ ಸಾಂಪ್ರದಾಯಕರಿಗೆ ಒದಗಿ ಬಂದ ಕೃಷ್ಣ ಭಗವದ್ಗೀತೆಯ ಕೃಷ್ಣ, ಕ್ರಿಯಾಶೀಲ ಕೃಷ್ಣ, ಸಾಮಾಜಿಕ, ಚಾರಿತ್ರಿಕ, ಧಾರ್ಮಿಕ ಹೊಣೆಗಾರಿಕೆಗಳ ಸಾರರೂಪ ಕೃಷ್ಣ ಇನ್ನೂ ನಿರ್ದಿಷ್ಟವಾಗಿ ಹೇಳುವುದಾದರೆ, ಅರ್ಜುನನ ಜತೆಗೆ ಒಂದೇ ರಥದಲ್ಲಿ ಕೂರುವ ಕೃಷ್ಣ ಮಹಾಭಾರತದಲ್ಲಿ ಕೂಡಾ ಅರ್ಜುನ ಮತ್ತು ಕೃಷ್ಣರಿಬ್ಬರನ್ನೂ ಅನೇಕ ಕಡೆ ಕೃಷ್ಣದ್ವಯರು ಎಂದೇ ಕರೆಯಲಾಗುತ್ತದೆ ಎಂಬ ಬಗ್ಗೆ ವಿದ್ವಾಂಸರು ಗಮನ ಸೆಳೆದಿದ್ದಾರೆ.[1] ಇಂದ್ರ ಮತ್ತು ವಿಷ್ಣುವಿನ ಸ್ನೇಹದ ಪರಮರೂಪ ಇವರಿಬ್ಬರು ಎಂಬ ಅಭಿಪ್ರಾಯವೂ ಇದೆ[2] ಆತ ಬಂಡಿಯ ಬೋವನಾಗುತ್ತಾನೆ. ಏಕೆಂದರೆ, ಅದು ಧರ್ಮಯುದ್ಧ. ಇಬ್ಬರು ಕೃಷ್ಣರು ಒಂದೇ ರಥದಲ್ಲಿ ಕೂರುವ ಚಿತ್ರವೇ ಧೃತರಾಷ್ಟ್ರನಿಗೆ ಎದೆಯಲ್ಲಿ ದಿಗಿಲು ಉಕ್ಕಿಸುತ್ತದೆ. ಹಾಗೆಂದು ಸಂಜಯನಿಗೆ ಆತ ವ್ಯಾಸಭಾರತದಲ್ಲಿ ಹೇಳುತ್ತಾನೆ ಕೂಡಾ. ಅವರಿಬ್ಬರೂ ಏಕರಥಿಗಳಾದದ್ದೇ ಪ್ರಚಂಡ ಘಟನೆ

---

1 Alf Hiltebeitel, The two Krishnas on one chariot Upanishadic and Epic Mythology (History of Religions, 1984) pp-1-26

2 Jan Gonda, Aspects of Early Vishnuism (1954, rept Delhi Motilal Banarasidas, 1969) p-160

ಅದರಲ್ಲೂ ಕರ್ಣಾರ್ಜುನರ ಕಾಳಗದ ಹೊತ್ತಲ್ಲಿ ಇದು ಇನ್ನೂ ಭೀಕರ ರೂಪಕ್ಕೆ ತಿರುಗುತ್ತದೆ. ಕರ್ಣನ ರಥ–ಕೃಷ್ಣಾರ್ಜುನರ ರಥ! ಇವೆರಡರ ನಂಜು ಹಳೆಯದು. ಅಥವಾ ಕಾಲಾತೀತ ಎಂಬಂತೆ ಕಾಣುವಂಥದು. ಋಗ್ವೇದದಲ್ಲೂ ಇದರ ಪ್ರಸ್ತಾಪವಿದೆ ಎಂದು ಪ್ರಸಿದ್ಧ ಪುರಾಣ ವಿದ್ವಾಂಸ ಜಾರ್ಜ್ ದುಮೋಜಿಲ್ ತರ್ಕಿಸುತ್ತಾರೆ. ಅಲ್ಲೂ ಸೂರ್ಯ ಮತ್ತು ಇಂದ್ರರ ರಥೀಯ ಕಾಳಗವಿದೆ. ಅಲ್ಲೂ ಇಂದ್ರ ಗೆಲ್ಲುತ್ತಾನೆ. ಸೂರ್ಯ ಸೋಲುತ್ತಾನೆ. ಅನೇಕ ರೀತಿಯ ಅರ್ಥಗಳನ್ನು ವಿದ್ವಾಂಸರು ಇಲ್ಲಿ ಹೊಳೆಯಿಸುತ್ತಾರೆ. ಇಂದ್ರ ಮಳೆಯ, ಬಿರುಗಾಳಿಯ, ಮೋಡಗಳ ಅಧಿದೇವತೆ ಇಲ್ಲೂ ಇಂದ್ರನ ಮಗ ಅರ್ಜುನ ಗೆಲ್ಲುತ್ತಾನೆ. ಸೂರ್ಯನ ಮಗ ಸೋಲುತ್ತಾನೆ. ಆದರೆ, ಈ ಯುದ್ಧಕ್ಕೆ ಮೂಲದಲ್ಲಿ ಒಂದು ದೈವಿಕ ಛಾಯೆ ಇದೆ. ಪ್ರಾಕೃತಿಕ ವ್ಯಾಪಾರಗಳನ್ನು ಪುರಾಣೀಕರಿಸುವ ದಿವ್ಯ ಗುಣವಿದೆ. ಹೀಗೆ ವೇದಗಳಲ್ಲಿನ ಮಿಥ್‌ಗಳನ್ನು ಪ್ರಾಕೃತಿಕ ವ್ಯಾಪಾರ ಗಳಂತೆ ಅರ್ಥೈಸುವುದು ೧೯ನೇ ಶತಮಾನದ ಆಚೆಗಿನ ಯುರೋಪಿಯನ್ ವಿದ್ವಾಂಸರ ದುರಭ್ಯಾಸ ಎಂದರೂ ಸರಿಯೆ. ಅದರಿಂದ ಅದರ ಸೌಂದರ್ಯಕ್ಕೆ ಬಾಧಕವಿಲ್ಲ. ಅರ್ಜುನನ ಹಿನ್ನೆಲೆಯಲ್ಲಿ ವೇದಗಳಲ್ಲಿನ ಮಳೆಗಾಲವಿದೆ. ಆ ವರ್ಷಾಕಾಲದ ಹೊಡೆತಕ್ಕೆ ಸೂರ್ಯನೂ ಮಂಕಾಗುತ್ತಾನೆ. (ಹಿಮಾಲಯದ ಬುಡವಾದ ಈ ಶಿವಾಲಿಕ ಪರ್ವತಗಳಲ್ಲಂತೂ ಈ ಮಾತು ನೂರಕ್ಕೆ ನೂರು ಸತ್ಯ. ಇಲ್ಲಿ ಇಡೀ ಮಳೆಗಾಲದಲ್ಲಿ ಸೂರ್ಯ ಸೊರಗಿದ್ದಾನೆ) ಆದರೆ, ಕುಮಾರ ವ್ಯಾಸನ ಅರ್ಜುನನಿಗೆ ಆ ಮಳೆಗಾಲದ ಭೋರ್ಗರೆತದ ಪ್ರಭಾವಳಿ ಇಲ್ಲ. ಸರಿ, ಆದರೂ ಒಂದು ಪರಂಪರೆಯ ಆಕಾಶದಲ್ಲಿ ಒಮ್ಮೆ ಕಾಣಿಸಿಕೊಂಡ ಮಿಂಚು ಮತ್ತೆ ಮಿಂಚುವುದೇ ಹಾಗೆ. ಕುಮಾರವ್ಯಾಸನ "ಉದ್ಯೋಗ ಪರ್ವ"ದಲ್ಲಿ ದ್ರೌಪದಿ ಕೃಷ್ಣಸಂಧಾನದ ಹೊತ್ತಿನಲ್ಲಿ ಸಾಕ್ಷಾತ್ ಮಳೆಗಾಲದ ಹಾಗೆಯೇ ಕಾಣಿಸಿಕೊಳ್ಳುತ್ತಾಳೆ "ಭ್ರೂಲತೆಯ ಸುರಚಾಪದುರುಕೇಶಾಳಿಗಳ ಕಾರ್ಮುಗಿಲಪಾಂಗದ..."ಪದ್ಯವನ್ನು ಕನ್ನಡ ಕಾವ್ಯರಸಿಕರು ಮರೆಯ ಲಾದೀತೇ? ಅದನ್ನು ಮರೆತವರ ಮನಸ್ಸು ಮಳೆಯನ್ನು ಕಾಣದ ಮರುಭೂಮಿ–(ಇದನ್ನು ಎಸ್. ವಿ. ರಂಗಣ್ಣ ಬರೆದಿದ್ದರೆ ಹೀಗೆ ಬರೆಯುತ್ತಿದ್ದರೆ?)

ಇಲ್ಲಿ ನಾನು ಹೇಳಬೇಕೆಂದಿದ್ದದ್ದು ಬೇರೆ. ವೇದಗಳಲ್ಲಿ ಪ್ರಾಕೃತಿಕ ವ್ಯಾಪಾರ ಪುರಾಣವಾಯಿತು. ವ್ಯಾಸಭಾರತದಲ್ಲಿ ಅದು ವಿರಾಟ್‌ಮಹತ್ವದ ಕಾವ್ಯ ವಸ್ತುವಾಯಿತು. ಆದರೆ ಕುಮಾರವ್ಯಾಸನ ಮೇಲಿದ್ದ ಸಾಂಪ್ರದಾಯಕ ಒತ್ತಡದ ಫಲ: ಅದು ವೈದಿಕ ಸಂಪ್ರದಾಯ ರಕ್ಷಣೆಯ ಸೀಮಿತ ವಸ್ತುವಾಯಿತು.

ಕುಮಾರವ್ಯಾಸನ "ಕರ್ಣಪರ್ವ" ಓದಿದರೆ ಆತನ ಮಡಿವಂತಿಕೆಯ ಆಳ, ಅಪಾಯಗಳು ಗೋಚರವಾಗುತ್ತವೆ. ಎಲ್ಲ ಅ–ವೈದಿಕ ಮತ್ತು ದೈತ್ಯ, ರಾಕ್ಷಸೀಯ ಶಕ್ತಿಗಳನ್ನು ಕರ್ಣನ ಪಂಗಡಕ್ಕೆ ಸೇರಿಸಿ ಕವಿ ತಾನೇ ಕರ್ಣನ ಮೇಲೆ ಯುದ್ಧ ಮಾಡುತ್ತಾನೆ. ಒಳ್ಳೆಯದೆಲ್ಲ ಅರ್ಜುನನ ಕಡೆಗೆ, ಕೆಟ್ಟದ್ದೆಲ್ಲ ಕರ್ಣನ ಕಡೆಗೆ. ವ್ಯಾಸನ ಕರ್ಣಪರ್ವದಲ್ಲೇ ಈ ರೀತಿಯ ಸಂಪ್ರದಾಯಶರಣತೆಯ ಸ್ಪಷ್ಟ ಸೂಚನೆ ಇದೆಯಾದರೂ, ಆತ ವಿಸ್ಮಯದಲ್ಲಿ, ದಿಗ್ಭ್ರಮೆಯಲ್ಲಿ ಹೇಳಿದ್ದನ್ನು ಕುಮಾರವ್ಯಾಸ ಅತಿಗೆ ತೆಗೆದುಕೊಂಡು ಹೋಗುತ್ತಾನೆ. ವೇದ–ಪುರಾಣಗಳಲ್ಲಿ ಬರುವ ದಿವ್ಯರಥ ಇಲ್ಲಿ ವೇದ ಪ್ರಾಮಾಣ್ಯ–ವರ್ಣಾಶ್ರಮ ಧರ್ಮವನ್ನು ರಕ್ಷಿಸುವ ರಥವಾಗಿಬಿಡುತ್ತದೆ.

ಇದನ್ನೇ ಇನ್ನೊಂದು ರೀತಿಯಿಂದ ವಿಸ್ತರಿಸುವುದಾದರೆ: ಕುಮಾರವ್ಯಾಸನ ಕೃಷ್ಣ ಭಾಗವತದ ಕೃಷ್ಣನಲ್ಲ, ಬೆಣ್ಣೆಕಳ್ಳ ಕೃಷ್ಣನಲ್ಲ, ರಾಧಾಹೃದಯ ಚೋರ ಕೃಷ್ಣನಲ್ಲ; ಕುಮಾರವ್ಯಾಸನ ಕೃಷ್ಣನಿಗೆ ಎಲ್ಲೂ ಖಾಸಗಿ ಜೀವನವೇ ಇಲ್ಲ ಎಂಬುದನ್ನು ಗಮನಿಸಬೇಕು. ಅಲ್ಲಿ ಅನೇಕರಿಗೆ ಖಾಸಗಿ ಜೀವನವಿದೆ. ಒಮ್ಮೆ ಯಂತೂ ಭೀಮ ಕೆರಳಿ ದ್ರೌಪದಿಗೆ ಹೇಳಿಯೂ ಬಿಡುತ್ತಾನೆ: "ಕಲಹಕಾದೊಡೆ ನಾವು, ಕಾಮಿಸುವವರು ಕೆಲರು". ಇಷ್ಟಾದರೂ ದ್ರೌಪದಿಯನ್ನು ಕಾಮಿಸಲು ಕುಮಾರವ್ಯಾಸ ಅವನಿಗೂ ಸಾಕಷ್ಟು ಅವಕಾಶ ಕೊಟ್ಟಿದ್ದಾನೆ. ಆದರೆ, ಕೃಷ್ಣ ಸದಾ ಕಲಹದಲ್ಲೇ ಇರುವಾತ. ಸದಾ ಕಾಳಗದ ಕಣದಲ್ಲೇ ಇದ್ದು ಅವನಿಗೆ ಉಳಿದ ಗೋಪಿಕೆಯರಿರಲಿ, ರಾಧೆಯನ್ನು ಕಾಣಲು ಕೂಡಾ ಅವಕಾಶವಿಲ್ಲ. ರಾಧೆ ಉರಿದು ಹೋಗಿರಬೇಕು!

ಕುಮಾರವ್ಯಾಸ "ವ್ಯಾಸಭಾರತ"ವನ್ನು ಸ್ವೀಕರಿಸಿದ ಕ್ರಮದಲ್ಲಿ, ಕೃಷ್ಣನನ್ನು ಆತ ಕಂಡರಿಸಿದ ಕ್ರಮದಲ್ಲೇ ಸವರ್ಣೀಯ ಸಾಂಪ್ರದಾಯಕ ಪ್ರತಿಭೆಯ ಸಾಂಸ್ಕೃತಿಕ ರಾಜಕಾರಣವಿದೆ. ಭಕ್ತಿಯ ಕ್ರಾಂತಿಕಾರಕತೆ ಇಲ್ಲಿ ಕರಗಿ ಹೋಗಿ ಅದನ್ನು ಕಾಠಿಣ್ಯಕ್ಕೆ ಪರಿವರ್ತಿಸಲಾಗಿದೆ.

ಹಾಗಾದರೆ, ಕುಮಾರವ್ಯಾಸನ ಪ್ರತಿಭೆ ಎಲ್ಲಿದೆ? ಆತ ಸಂಪ್ರದಾಯದ ಶಠತನವನ್ನು ಎಲ್ಲಿ ಮೀರುತ್ತಾನೆ? ಇದಕ್ಕೆ ಉತ್ತರ: ಆತನ ನಾಲಿಗೆಯಲ್ಲಿ ಹಲವು ಕುಲಗಳಿವೆ. ಸಿದ್ಧಾಂತದಲ್ಲಿ ಮಡಿ ಮಡಿ ಎಂದು ಹೇಳುವ ಕವಿ ಭಾಷೆಯಲ್ಲಿ ಎಲ್ಲ ಕುಲಗಳ ಜತೆಗೆ ಬದುಕುತ್ತಾನೆ. ಮಡಿ ಎಂದರೆ ಭಾಷಾಬಳಕೆಯ ನಿಷೇಧ. ಆದರೆ, ಕುಮಾರವ್ಯಾಸ ಕವಿಯಾಗಿ ಶೂದ್ರಾತಿಶೂದ್ರರ ಕೇರಿ, ಹಟ್ಟಿಗಳಲ್ಲೇ

ಸುತ್ತಾಡುತ್ತಾನೆ. ಅಮೂರ್ತ ತತ್ವದ ಒತ್ತಾಯವನ್ನು, ಭಾಷೆಯ ಮೂರ್ತ ವಿಲಾಸದಲ್ಲಿ ಮೀರುತ್ತಾನೆ.

ಕಥಾಸಾಹಿತ್ಯಕ್ಕೆ ಹೋಲಿಸಿ ಈ ಚರ್ಚೆಯನ್ನು ಮುಂದುವರೆಸಬೇಕು. ಸಂಸ್ಕೃತದಲ್ಲಿ ಬರೆವಾತನಿಗೆ ಕೂಡಾ ಕಥೆಯಲ್ಲಿ ಶೂದ್ರ ಪಾತ್ರಗಳ ಸಂಪರ್ಕ ಬಂದೇ ಬರುತ್ತದೆ. ಶೂದ್ರ ಪಾತ್ರಗಳಿರದ ಕಥೆ ಮಹಾ ಪೊಳ್ಳು. ಮನುಷ್ಯರು ಹೇಳುವ ಕಥೆಗಳ ಮಾತಿರಲಿ, ಗಿಣಿಗಳು ಹೇಳುವ ಕಥೆಗಳಲ್ಲೂ ವರ್ಣರಂಜಿತ ಶೂದ್ರರು ಬರುತ್ತಾರಲ್ಲ! ಬೃಹತ್ಕಥೆಯ ಜೈನ ಅವತರಣಿಕೆಯೊಂದರಲ್ಲಿ ಜೀವಭಯದಿಂದ ಗಿಣಿಯೊಂದು ಕ್ಷೌರಿಕ ಹೆಂಗಸಿನ, ಬೆಸ್ತರ ಹೆಂಗಸಿನ ಬಗ್ಗೆ ನೂರಾರು ಕಥೆ ಹೇಳಿದ ಪ್ರಸ್ತಾಪ ಬರುತ್ತದೆ.[1] ಕುಮಾರವ್ಯಾಸ ಕಥೆಗಾರನಲ್ಲ, ಕವಿ. ಹೀಗಾಗಿ, ಹಲವು ಕುಲಗಳು ಭಾಷಾರೂಪದಲ್ಲಿ ವಿಜೃಂಭಿಸುತ್ತವೆ. ಮೌಲ್ಯಗಳ ಮಟ್ಟದಲ್ಲಿ, ಅರ್ಥದ ಮಟ್ಟದಲ್ಲಿ ಮನ್ನಣೆ ಸಿಗದ್ದಕ್ಕೆ ಭಾಷಾ ಪ್ರಯೋಗದ ಮಟ್ಟದಲ್ಲಿ ಮನ್ನಣೆ ಸಿಗುತ್ತವೆ. ನುಡಿಗೂ ಜೀವವಿದೆ, ಅರ್ಥಕ್ಕೆ ಮಾತ್ರವಲ್ಲ. ಕುಮಾರವ್ಯಾಸ ಕಥನದ ಹಂತದಲ್ಲಿ, ಅರ್ಥ ಮತ್ತು ಮೌಲ್ಯದ ಮಟ್ಟದಲ್ಲಿ ಅಂಥ ದೊಡ್ಡ ಕವಿಯಲ್ಲ. ಈ ಬಗೆಗೆ ಕುವೆಂಪು ತುಂಬ ಹಿಂದೆಯೇ ಚರ್ಚೆ ಮಾಡಿದ್ದಾರೆ. ಆದರೆ, ಆತ ಬೀದಿಯಿಂದ ಪದಗಳನ್ನು ಎತ್ತಿ ಅದನ್ನು ಆರಾಧ್ಯದೈವ ಕೃಷ್ಣನಿಗೂ ಮುಡಿಸಿಬಿಡುತ್ತಾನೆ. ಹಾಗೆ ಮಾಡುವ ಮೂಲಕ ತಾನೂ ಬಚಾವಾಗುತ್ತಾನೆ. ಕನ್ನಡವನ್ನು ಕಾಪಾಡುತ್ತಾನೆ.

ಹೀಗೆ ಸಾಮಾನ್ಯ ಜನರ ಭಾಷಾಪ್ರವಾಹದಲ್ಲಿ ಮುಳುಗಿ ತನ್ನ ಮೌಲ್ಯಗಳ ಕಳಂಕವನ್ನು ತೊಳೆದುಕೊಳ್ಳುವುದು ಪ್ರಾಚೀನರ ಒಂದು ದಾರಿ.

೩

ವಿದ್ಯಾಪತಿ ಎಂಬ ಪೂರ್ವಸೂರಿಯ ದಾರಿ ಬೇರೆ.

ಆತನೂ ಪ್ರಾಚೀನ ಸಮಾಜದ "ಕುಲೀನ" ವಾದದ ಪ್ರತಿಪಾದಕ. ಕುಮಾರವ್ಯಾಸ ವಿದುರನೀತಿಯಲ್ಲಿ ಯಾವ್ಯಾವುದನ್ನು ಆದರ್ಶ ಎಂದು ಹೇಳಿ ಸುತ್ತಾನೋ ಅವೆಲ್ಲದರ ಆರಾಧಕ ಈತ. 'ಕುಲೀನತೆ' ಎಂದರೆ ವರ್ಣಶುದ್ಧಿ.

1. The Vasudevahindi - An Authentic Jain version of the Bruhatkatha (Ahamedabad, 1977) p-370.

ವಿದ್ಯಾಪತಿಯ ಮಿಥಿಲಾ ಸಮಾಜದಲ್ಲಂತೂ ಇದು ಪರಿಪೂರ್ಣಸ್ಥಿತಿಗೆ ಮುಟ್ಟಿತ್ತು. 'ಅಕುಲೀನ' ಎಂದರೆ ವಿದ್ಯಾಪತಿಯ ಪ್ರಕಾರ ಕೇಡಿನ ಪರಮರೂಪ.

ಆತನೂ ಕೃಷ್ಣಭಕ್ತ ಎಂಬುದನ್ನೂ ಈ ಹಿಂದೆಯೇ ಸೂಚಿಸಲಾಗಿದೆ. ಆದರೆ, ಕುಮಾರವ್ಯಾಸನ ಕೃಷ್ಣ ಬೇರೆ, ವಿದ್ಯಾಪತಿಯ ಕೃಷ್ಣ ಬೇರೆ. ರಾಧಾ-ಕೃಷ್ಣರ ವಿಲಾಸದ ಸಮೃದ್ಧಚಿತ್ರಣದ ಮೂಲಕ ತನ್ನ ಸಂಪ್ರದಾಯಕತೆಯನ್ನು ವಿದ್ಯಾಪತಿ ನೀಗಿಸಿಕೊಳ್ಳುತ್ತಾನೆ.[1]

ವಿದ್ಯಾಪತಿಯ ಕವಿತೆಯಲ್ಲಿನ ರಾಧಾ-ಕೃಷ್ಣರು ಎಲ್ಲ ಬಗೆಯ ಕುಲೀನ ಮೌಲ್ಯಗಳನ್ನು ಮೀರಿದವರು ಅದಕ್ಕೆಂದೇ ಊರಹೊರಗಿನ ಕಾಡು, ಪೊದೆಗಳಲ್ಲಿ ಅವರ ಉನ್ಮತ್ತ ಸರಸ ಕಾಳಗದ ಕಲಿಯಾದ ಕೃಷ್ಣ ಕುಮಾರವ್ಯಾಸನಿಗೆ ಮುಖ್ಯವಾದರೆ, ವಿದ್ಯಾಪತಿಗೆ 'ರಾಸಲೀಲಾ'ದ ಕೃಷ್ಣ ಮುಖ್ಯ. ಪ್ರೇಮ ಎಂದರೆ ಇಲ್ಲಿ ಉಲ್ಲಂಘನೆ. ವಿದ್ಯಾಪತಿಯ ರಾಧೆ ಕೃಷ್ಣನಿಗಿಂತ ಚಿಕ್ಕವಳು. ಇದು ಮೊದಲ ಘಟ್ಟವಾದ್ದರಿಂದ ರಾಧೆಯ ಬಗೆಗಿನ ಕಥೆಗಳನ್ನು ವಿದ್ಯಾಪತಿ ಒಪ್ಪಲಾರ. 'ಪೂರ್ವರಾಗ'ದಲ್ಲಿ ಇಬ್ಬರೂ ಒಬ್ಬರ ಬಗೆಗೊಬ್ಬರು ಹುಚ್ಚರಾಗುತ್ತಾರೆ. 'ಉತ್ಪ್ರೇಕ್ಷೆ'ಯೇ ವಿದ್ಯಾಪತಿಯ ಅತ್ಯಂತ ಪ್ರೀತಿಯ ಅಲಂಕಾರ. ಕುಲೀನತೆ ಕಟ್ಟಿಹಾಕುವುದನ್ನು 'ಉತ್ಪ್ರೇಕ್ಷೆ' ಎಗರಿಸಿಕೊಂಡು ಹಾರುತ್ತದೆ

'ರಾಸಲೀಲಾ'ದ ಕೃಷ್ಣನೇ ಹಾಗೆ. ಆತ ಮೂಲತಃ ಕಳ್ಳ. ಆತ ಪ್ರೀತಿಯ ಕಳ್ಳ.[2] ಬೆಣ್ಣೆಯ ಕಳ್ಳ. ಆತ ಬೆಣ್ಣೆಯನ್ನು ಮಾತ್ರವಲ್ಲ, ಹೃದಯಗಳನ್ನೂ ಕದಿಯುತ್ತಾನೆ ಕುಲೀನರಿಗೆ ಸಾಧ್ಯವಾಗದ ರೀತಿಯಲ್ಲಿ ಕದ್ದು ಜೀವಚೈತನ್ಯವನ್ನು ಕಾಪಾಡಿಕೊಳ್ಳುತ್ತಾನೆ ಬ್ರಜ್‌ಭಾಷೀ ಪರಂಪರೆಗಳು ತಮ್ಮ ಕಲೆಯಲ್ಲಿ ಇದನ್ನೇ ತೀವ್ರವಾಗಿ ಆರಾಧಿಸುತ್ತವೆ. ಎಲ್ಲ ಗಡಿಗಳನ್ನೂ ಕೃಷ್ಣ ಇಲ್ಲಿ ಮೀರುತ್ತಾನೆ. ಬರೀ ಜಾತಿ, ವರ್ಣಗಳ ಗಡಿ ಮಾತ್ರವಲ್ಲ, ಗಂಡು-ಹೆಣ್ಣು ಎಂಬ ಗಡಿಗಳೂ ಇಲ್ಲಿ ಇಲ್ಲ. ಗೋಕುಲ ಮತ್ತು ಮಧುರೆಗೆ ಇರುವ ವ್ಯತ್ಯಾಸವೂ ಇಲ್ಲಿ ಮುಖ್ಯ. ಪು. ತಿ. ನ.ರ "ಗೋಕುಲ ನಿರ್ಗಮನ" ಕೂಡಾ ಈ ಗಡಿಹಾರುವ ಭಯವನ್ನೇ ಶೋಧಿಸುತ್ತದೆ. ನಗರದ ಕೃಷ್ಣ ಗಡಿ ಹಾರುವವನಲ್ಲ. ಗಡಿಯನ್ನು

---

1. R Chowdhari, the Mithila in the Age of Vidyapati (Varanasi, Chowkhambha Orientalia, 1976) pp-105-219
ಈ ಭಾಗದಲ್ಲಿ ವಿದ್ಯಾಪತಿಯ ಸಾಮಾಜಿಕ ಚಿಂತನೆಯ ಸ್ಪಷ್ಟ ಚಿತ್ರಣವನ್ನು ಈ ಲೇಖಕರು ನೀಡುತ್ತಾರೆ
2. ಈ ಕೃಷ್ಣ ಪ್ರತಿಮೆಗಳ ತಾತ್ವಿಕ ಚರ್ಚೆಗೆ: John Stratton Hawley, Thief of Butter, Thief of Love (History of Religions, 1979) pp 203-270.

ಕಾಯುವವನು ಧರ್ಮಗ್ಲಾನಿ ಆಗದ ಹಾಗೆ ಕಾಪಾಡುವವನು. ದೊರೆ ಶಿವಸಿಂಹನಿಗೆ ಅನೇಕ ಹೆಂಡತಿಯರಿದ್ದು, ಅವರನ್ನು ಒಲಿಸಿಕೊಳ್ಳಲು ಅವನಿಗೆ ಹಾಡುಗಳ ಅಗತ್ಯವಿತ್ತು. ಅದಕ್ಕಾಗಿ ಈ ಗೀತಗಳನ್ನು ವಿದ್ಯಾಪತಿ ಬರೆದ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ, ಅದರ ಶಕ್ತಿ–ವಿಲಾಸ ಆ ರೀತಿಯ ರಾಜಾಜ್ಞೆಗೆ ಮೀರಿದ್ದು. ರಾಧೆ–ಕೃಷ್ಣರ ಪ್ರೀತಿ ರಾಜರ ಕುಲೀನತೆ ಮತ್ತು ಮರ್ಯಾದೆಗಳ ಆಚೆಗಿನದು.

ಮಿಥಿಲೆ ಇಲ್ಲಿ ತನ್ನೆಲ್ಲ ವೈಯ್ಯಾರ, ವಿಲಾಸ, ನಾದ, ಗಂಧಗಳೊಂದಿಗೆ ಕಾಣಿಸಿಕೊಳ್ಳುತ್ತದೆ ಇಲ್ಲಿ ವಿದ್ಯಾಪತಿ ಶುದ್ಧಾಂಗವಾಗಿ ಮಿಥಿಲೆಯ ಕೂಸು. ಅವು ಜನತೆಯ ಜೀವನದ ಒಡಲಿನಿಂದ ಹುಟ್ಟಿದ ಹಾಡುಗಳು. ಒಂದು ಮಟ್ಟದಲ್ಲಿ ಅವು ಬೇಂದ್ರೆಯವರ ಕವಿತೆಯಿದ್ದಂತೆ ಅಲ್ಲಿ ಧಾರವಾಡ, ಇಲ್ಲಿ ಮಿಥಿಲೆ. ವಿದ್ಯಾಪತಿಯ ಕವಿತೆಯಲ್ಲೂ ಜಿಪುಣರು, ಗಾಣಿಗರು, ಬೆಸ್ತರು, ಸಿರಿತನ, ಬಡತನ, ಮುಸ್ಲಿಮರು, ಶೈವರು, ಬಾಲವಧುಗಳು ಎಲ್ಲರೂ ಬರುತ್ತಾರೆ ಹಾಗೆಯೇ ಮಿಥಿಲೆಯ ಹಣ್ಣುಗಳು, ಹಕ್ಕಿಗಳು

ತತ್ವದಲ್ಲಿ, ಮೌಲ್ಯದಲ್ಲಿ ನಿರ್ಬಂಧ ಅನುಭವಿಸಿದ್ದ, ಅದನ್ನು ಒಪ್ಪಿಯೂ ಇದ್ದ ವಿದ್ಯಾಪತಿ ಅದನ್ನು ರಾಧಾಕೃಷ್ಣರ ಪುರಾಣದಲ್ಲಿ ದಾಟುತ್ತಾನೆ ಚರಿತ್ರೆ ಸಿದ್ಧಾಂತವಾಗಿ ಬಿಟ್ಟಾಗ ಪುರಾಣ ಸ್ವಾತಂತ್ರ್ಯವಾಗಿ ಬಿಡುತ್ತದೆ ಮಾಸ್ತಿ ಈ ಹಿಂದೆ ತಮ್ಮ 'ವಿಮರ್ಶೆ' ಕೃತಿಯಲ್ಲಿ ಸ್ವಾತಂತ್ರ್ಯವನ್ನು 'ರೊಮ್ಯಾಂಟಿಸಿಸಂ' ಎಂದೂ, 'ಸಿದ್ಧಾಂತ'ವನ್ನು 'ಕ್ಲಾಸಿಸಿಸಂ' ಎಂದೂ ಅನುವಾದಿಸಿದ್ದರು.[1] ವಿದ್ಯಾಪತಿ ಜೀವನದರ್ಶನದ ಮಟ್ಟದಲ್ಲಿ ಕ್ಲಾಸಿಸಿಸ್ಟ್ ಆದವನು, ಪುರಾಣದ ಮೂಲಕ ಸ್ವಾತಂತ್ರ್ಯ ಪಡೆದುಕೊಂಡು ರೊಮ್ಯಾಂಟಿಕ್ಕನಾಗುತ್ತಾನೆ.

ವಿದ್ಯಾಪತಿ ಇನ್ನೂ ಒಂದು ಕಾರಣಕ್ಕೆ ಮುಖ್ಯನಾದವನು. ಮಧ್ಯಯುಗೀನ ಸವರ್ಣೀಯ ಸಂವೇದನೆಯನ್ನು ದಟ್ಟವಾಗಿ ಕಾಡುವ ಸಮಸ್ಯೆಯೊಂದನ್ನು ಈತನೂ ಶೋಧಿಸಿದ್ದಾನೆ: ಅದು ಪ್ರಭುತ್ವದ ಬಗ್ಗೆ ಆಕರ್ಷಣೆ ಮತ್ತು ಆತಂಕದ ದ್ವಂದ್ವ. ವರ್ಣಗಳ ನಿರ್ದಿಷ್ಟ ಜವಾಬ್ದಾರಿಗಳ ಮೌಲ್ಯ ಈ ಚಾರಿತ್ರಿಕ ಘಟ್ಟದಲ್ಲಿ ವಿಚಿತ್ರ ರೀತಿಯ ಸಂಕರಕ್ಕೆ ಒಳಗಾಗಿಬಿಟ್ಟಿತ್ತು. ಜೈನರಲ್ಲೂ ಈ ವಸ್ತು ಇದೆ

---

1 ಮಾಸ್ತಿ ವೆಂಕಟೇಶ ಅಯ್ಯಂಗಾರ್, ವಿಮರ್ಶೆ (ಬೆಂಗಳೂರು, ಜೀವನ ಕಾರ್ಯಾಲಯ, ೧೯೭೨) ಪು–೩೪

ಎಂಬುದು ನಿಜ. ಪಂಪನ ಆದಿಪುರಾಣವನ್ನೇ ಚರ್ಚೆಗೆ ತೆಗೆದುಕೊಳ್ಳಬಹುದು. ಜೈನರು ಮಹಾವಾಸ್ತವವಾದಿಗಳಾದ್ದರಿಂದ ಅವರಿಗೆ ಈ ಬಗ್ಗೆ ದ್ವಂದ್ವ ಇಲ್ಲ. ವೈರಾಗ್ಯ ಪರಮಮೌಲ್ಯ ಸರಿ. ಅದು ಬಾಹುಬಲಿಯ ದಾರಿ. ಆದರೆ, ಭರತನಿಗೆ ಅಷ್ಟು ಸುಲಭವಾಗಿ ಆ ದಾರಿ ಸಿಕ್ಕುವುದಿಲ್ಲ. ಆ ಬಗ್ಗೆ ಅವನಿಗೆ ಅಂಥ ಘೋರ ಆತಂಕವೂ ಇಲ್ಲ. ಚರಿತ್ರೆಯ ಕಾಡಿನಲ್ಲಿ ಅಲೆಯುವ ಹುಲಿ ಆತ. ಹೀಗೆ, ತತ್ವಶಾಸ್ತ್ರದಲ್ಲಿ ವಾಸ್ತವವಾದಿಗಳೆಂದು ಕರೆಸಿಕೊಂಡ ಜೈನರು ಕಾವ್ಯ–ಪುರಾಣ ದಲ್ಲಿ ಮುಖ್ಯ ವಸ್ತುವೊಂದನ್ನು ಹೀಗೆ ಸ್ಪಷ್ಟ ವರ್ಗೀಕರಣ ಮಾಡಿ ನಿರ್ವಹಿಸುತ್ತಾರೆ.

ಆದರೆ, ವಿದ್ಯಾಪತಿಯನ್ನು ರೂಪಿಸಿದ್ದ ಸಂವೇದನೆ, ಕಷ್ಟಗಳು ಬೇರೆ. ಬ್ರಾಹ್ಮಣ–ಕ್ಷಾತ್ರ ಧರ್ಮಗಳ ನಡುವೆ ಸಂಕರವಾಗಿ ಒಂದರೊಳಗೊಂದು ತಲೆ ಎತ್ತತೊಡಗಿ ಆಗಲೇ ಸಾಕಷ್ಟು ಕಾಲವಾಗಿ ಹೋಗಿತ್ತು. ಉಪನಿಷತ್ತುಗಳಲ್ಲೇ ಕ್ಷತ್ರಿಯರು ಕ್ಷಾತ್ರದಾಚೆಗಿನ ಆಧ್ಯಾತ್ಮದ ಪ್ರಶ್ನೆಗಳನ್ನೂ ಎತ್ತಿದ್ದರು. ಕ್ಷಾತ್ರ ಸಂವೇದನೆಯಲ್ಲಿ ಎದ್ದ ಆತ್ಮಜಿಜ್ಞಾಸೆ, ಕ್ಷತ್ರಿಯ ಧರ್ಮದ ಸಾಂಪ್ರದಾಯಕ ಪಾತ್ರವನ್ನಷ್ಟೇ ಅಲ್ಲ, ಬ್ರಾಹ್ಮಣ್ಯದ ಸ್ವರೂಪವನ್ನು ಕದಡಿಬಿಟ್ಟಿತ್ತು. ಕಾಲ ಗಳನ್ನೂ ಬೆರೆಸಿ ಹೇಳುವುದಾದರೆ, ಜನಕ ಮಹಾರಾಜ ಬ್ರಹ್ಮರ್ಷಿಯಾದ ಮೇಲೆ ವಿದ್ಯಾರಣ್ಯನಿಗೆ ಚಕ್ರವರ್ತಿಯಾಗುವ ಅನಿವಾರ್ಯತೆ ಬರುವುದು ಸಹಜ ತಾನೇ? ಸ್ವತಃ ವಿಜಯನಗರ ಸಾಮ್ರಾಜ್ಯದ ಸಮಾಜದಲ್ಲೇ ಈ ರೀತಿಯ ಆಳವಾದ ತಾತ್ವಿಕ ಪ್ರಶ್ನೆಗಳು ಏಳತೊಡಗಿದ್ದವು. ಕೃಷ್ಣದೇವರಾಯ ಬರೆದದ್ದು ಎಂದು ಹೇಳಲಾದ 'ಆಮುಕ್ತ ಮೌಲ್ಯದ' ಕೃತಿಯ ಪ್ರಮುಖ ಆಶಯಗಳಲ್ಲಿ ಒಂದು ಇದು. ಚರಿತ್ರೆಯಲ್ಲಿನ ನಿಜವಾದ ಅಧಿಕಾರ ಒಂದು ಕಡೆಗೆ. ಆ ರೀತಿಯ ಲೌಕಿಕಾಧಿಕಾರದ ಆಚೆಗಿನ ಬ್ರಹ್ಮಜ್ಞಾನ ಇನ್ನೊಂದು ಕಡೆಗೆ.

ಯತಿಗಳು ಲೌಕಿಕಾಧಿಕಾರದ ಬೆನ್ನು ಹತ್ತಿದಾಗ ಅವರಿಗೆ ಉಳಿದೆಲ್ಲವೂ ಮರೆಯುತ್ತದೆ. ಯತಿಗಳಿಗೆ ರಾಜತ್ವದ ವಿಸ್ಮೃತಿ ಆವರಿಸಿದಾಗ ಉಳಿದೆಲ್ಲ ಸ್ಮೃತಿಗಳೂ ಹಾಗೇ ಜಾರಿಹೋಗಿಬಿಡುತ್ತವೆ. (ಈಗ ರಾಮಜನ್ಮಭೂಮಿ ಕರ್ಮಕಾಂಡದಲ್ಲಿ ಮುಳುಗಿರುವ ಪೇಜಾವರ ಸ್ವಾಮಿಗಳ ಹಾಗೆ). ಆದರೆ, ಈಗಿನಂತೆಯೇ ಮಧ್ಯಯುಗದಲ್ಲೂ ರಾಜತ್ವದ ಮೋಹಕ್ಕೆ ಧರ್ಮ ಸಂಸ್ಥಾಪನೆ ಎಂಬ ಹೆಸರಿತ್ತು. "ಆಮುಕ್ತ ಮೌಲ್ಯದ" ಕೃತಿಯಲ್ಲೂ ವೈಷ್ಣವ ಯತಿಯೊಬ್ಬ ರಾಜನಾಗಿ ಬ್ರಹ್ಮಜ್ಞಾನ ಪೂರ್ಣ ಮರೆಯುತ್ತಾನೆ. ಚರಿತ್ರೆಯ ಘಾಟು

ಮೂಗಿನಲ್ಲಿದ್ದಾಗ ಉಳಿದ ವಾಸನೆ ತಿಳಿಯುವುದಿಲ್ಲ. ಆ ಯತಿ–ರಾಜನಿಗೆ ಎಂಥದೋ ಒಂದು ಅವನ ಪೂರ್ವಾಶ್ರಮದ ರುಚಿ ಅಡಿಗೆ ಮಾಡಿಸಿ ಮತ್ತೆ 'ಸ್ಮೃತಿ' ಬರುವಂತೆ ಮಾಡಲಾಗುತ್ತದೆ. ಆತ ವೈರಾಗ್ಯಕ್ಕೆ ಹೋಗುತ್ತಾನೆ.

ವಿದ್ಯಾಪತಿಯಲ್ಲೂ ಶುದ್ಧಾಂಗವಾಗಿ ಇದೇ ವಸ್ತು ಬರುತ್ತದೆ. ಆತನ "ಗೋರಕ್ಷಾ ವಿಜಯ" ನಾಟಕದ ಆಶಯ ರಾಜತ್ವ ಮತ್ತು ಅಲೌಕಿಕ ಜ್ಞಾನಗಳ ಸಂಬಂಧದ ಪ್ರಶ್ನೆ. ಯೋಗಿ ಮತ್ಸ್ಯೇಂದ್ರನಾಥ ರಾಜನಾಗಿ ಪೂರಾ ಲೌಕಿಕ ವಿಲಾಸಗಳಲ್ಲಿ ಮುಳುಗಿಬಿಟ್ಟಿರುತ್ತಾನೆ. ಆತನ ಇಬ್ಬರು ಶಿಷ್ಯರುಗಳು– ಗೋರಖನಾಥ ಮತ್ತು ಕಣಾನಿಪಾದ– ಗುರುವನ್ನು ಹುಡುಕುತ್ತ ಹೋಗು ತ್ತಾರೆ. "ಶ್ರೀ ಗುರುವೆ, ನೀನು ಎಲ್ಲಿ ಕರಗಿಹೋದೆ?" ಆ ಇಬ್ಬರಿಗೂ ಅಲೌಕಿಕ ಶಕ್ತಿಗಳಿತ್ತು. ಇಬ್ಬರೂ ಸುಂದರ ನೃತ್ಯಗಾತಿಯರ ರೂಪತಾಳಿ, ಕುಣಿದು, ಮತ್ಸ್ಯೇಂದ್ರನಾಥನಿಗೆ ಹುಚ್ಚೆಬ್ಬಿಸುತ್ತಾರೆ. ಈ ಇಬ್ಬರು ಯೋಗಿಗಳೇ ತನ್ನ ಮಗನ ಸಾವಿಗೆ ಕಾರಣ ಎಂದು ತಿಳಿದುಕೊಂಡ ಮತ್ಸ್ಯೇಂದ್ರನಾಥ ಇಬ್ಬರನ್ನೂ ಕೊಲ್ಲಿಸಬೇಕೆಂದು ನಿರ್ಧರಿಸುತ್ತಾನೆ. ತಮ್ಮ ವಿಶೇಷ ಅಲೌಕಿಕ ಶಕ್ತಿಯಿಂದ ಸತ್ತ ಮಗನನ್ನು ಅವನಿಗೆ ಬದುಕಿಸಿಕೊಡುತ್ತಾರೆ. ಆಗ ಗೋರಖನಾಥನ ಗುರುತು ಹತ್ತುತ್ತದೆ. ಖಾಸಾಶಿಷ್ಯ. ರಾಜನಾಗಿ ತಾನು ಎಂಥ ಶಕ್ತಿವಿಶೇಷ ಕಳೆದುಕೊಂಡೆ ಎಂದು ಯೋಗಿ–ರಾಜ ಪರಿತಪಿಸುತ್ತಾನೆ. ಗೋರಖನಾಥ ಕೂಡಾ ಆ ಯೋಗಿ–ರಾಜನನ್ನು ಹಂಗಿಸುತ್ತಾನೆ. ಕಡೆಯಲ್ಲಿ ಮತ್ಸ್ಯೇಂದ್ರನಾಥ ಅರಮನೆ ಬಿಟ್ಟು ವೈರಾಗ್ಯ ತಾಳುತ್ತಾನೆ.

ವಿದ್ಯಾಪತಿ ಲೌಕಿಕ ಯಶಸ್ಸಿನ ಉಪಯೋಗಗಳನ್ನು ಬಲ್ಲವನು. ಹಾಗೆಯೇ ಅದರ ಮಿತಿಗಳನ್ನು ಕೂಡಾ ಬಲ್ಲವನು. ಆಸ್ಥಾನ ಕವಿಯಾಗಿದ್ದು ರಾಜಾಡಳಿತಕ್ಕೆ ಉಪಯುಕ್ತವಾಗುವಂಥದ್ದು ಬರೆಯಬೇಕು ಎಂಬ ಸತ್ಯ ತಿಳಿದಿದ್ದ ಪಂಡಿತ. ಆದರೆ, ಜನರ ನಾಲಿಗೆಯಲ್ಲಿ ಬಹುಕಾಲ ಬಾಳಬೇಕಾದರೆ ಆಸ್ಥಾನದ ಮರ್ಯಾದೆ ಗಿಂತ ಪ್ರೇಮದ ಕವಿಯಾಗಬೇಕು ಎಂಬುದನ್ನು ತನ್ನ ಒಳನೋಟಗಳಿಂದಲೇ ಅರಿತಿದ್ದ ಕವಿ. ಕುಲೀನತೆ ಮತ್ತು ಪ್ರಭುತ್ವಗಳ ನಡುವಣ ಹೊಂದಾಣಿಕೆಯ ಬಗ್ಗೆ ಸ್ಥೂಲ ಮನಸ್ಸಿನ ಮಟ್ಟದಲ್ಲಿ ಸ್ವೀಕಾರ, ಸೂಕ್ಷ್ಮ ಮನಸ್ಸಿನ ಮಟ್ಟದಲ್ಲಿ ಗೋರಖನಾಥನ ಮೌಲ್ಯಪ್ರಜ್ಞೆಯ ಬಗೆಗೆ ತುಡಿತ. ಹಾಗೆಯೇ ರಾಧಾಕೃಷ್ಣರ ಬಗೆಗೂ ತುಡಿತ.

೫

ವಿದ್ಯಾಪತಿ ಕತೆಗಾರನಾದ.

ಇಲ್ಲೂ ಅರ್ಥ ಮತ್ತು ರೂಪಗಳ ನಡುವಿನ ಸೂಕ್ಷ್ಮ ಕಾಳಗವೇ. ಚರಿತ್ರಕಾರರಿಗೆ "ಪುರುಷ ಪರೀಕ್ಷೆ" ಗಣಿಯಾಗಿರುವ ಕಾರಣ ಎಂದರೆ, ಅಲ್ಲಿ ಇತಿಹಾಸದ ಅನೇಕ ನಿಜವಾದ ನಾಯಕರು ಕಾಣಿಸಿಕೊಳ್ಳುತ್ತಾರೆ. ಆದರೆ, ಈ ಟಿಪ್ಪಣಿಯ ಉದ್ದೇಶ ಅದನ್ನು ಚರ್ಚಿಸುವುದಲ್ಲ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಜರುಗುವ ರೂಪ–ಪ್ರರೂಪ ನಿರ್ಮಾಣಗಳ ಚರ್ಚೆ ಇಲ್ಲಿಯ ಉದ್ದೇಶ.

ವಿದ್ಯಾಪತಿ ವೈದಿಕ ಕತೆಗಾರ ಹೀಗಾಗಿ, ಅವನಿಗೂ ಜಾನಪದ, ಬೌದ್ಧ ಮತ್ತು ಜೈನ ಕಥೆಗಾರರಿಗೂ ಅನೇಕ ವ್ಯತ್ಯಾಸಗಳಿವೆ. ಜಾನಪದ ಕಥೆಗಳಲ್ಲಿ ಜಡ–ಚೇತನಗಳೆಂಬ ಕೃತಕ ವ್ಯತ್ಯಾಸಗಳಿಲ್ಲ ಅಲ್ಲಿ ನೆಲ ನಗುತ್ತದೆ ಮೋಡ ಹುಡುಗಿಯಾಗುತ್ತಾಳೆ ಬೆಟ್ಟ ಗಂಡಾಗುತ್ತದೆ ನದಿ ಹುಡುಗಿಯಾಗುತ್ತಾಳೆ ಅಲ್ಲಿ ಮನುಷ್ಯರು ಯಾವಾಗ ಪ್ರಕೃತಿಯಾಗುತ್ತಾರೆ ಮತ್ತು ಅದರ ಉಲ್ಟಾ ಪ್ರಕ್ರಿಯೆ ನಡೆಯುತ್ತದೆ ಎನ್ನುವುದನ್ನು ಹೇಳುವುದೇ ಕಷ್ಟ ಬೌದ್ಧರು ತಮ್ಮ ಕಥೆಗಳಲ್ಲಿ ಈ ಚೌಕಟ್ಟನ್ನೇ ಮುಂದುವರೆಸಿದರು ಆದರೆ, ಕಡೆಯಲ್ಲಿ ಬೋಧಿಸತ್ವನನ್ನು ತಂದು ವಿಕಾಸಶೀಲ ಪ್ರಜ್ಞೆಯ ಮೂಲಕ ಇಡೀ ಕಥೆಯನ್ನು ಪುನರರ್ಥೈಸಲು ಪ್ರಯತ್ನಿಸಿದ್ದರು. ಈ ದೃಷ್ಟಿಯಿಂದ ಜೈನ ಕಥೆಗಳು ಬೌದ್ಧರಿಗಿಂತ ಮೂಲಕ್ಕೇ ಹೆಚ್ಚು ಹತ್ತಿರ ಎಂದು ವಿದ್ವಾಂಸರು ಭಾವಿಸುತ್ತಾರೆ ವಿದ್ಯಾಪತಿಯನ್ನು ವೈದಿಕ ಕಥೆಗಾರ ಎಂದದ್ದಕ್ಕೆ ಕಾರಣ– ಆತ ಕಥೆ ಹೇಳುವುದೇ ತನ್ನ ಮೌಲ್ಯಗಳ ಸ್ಥಾಪನೆಗೆ.

ಜಾನಪದ ಕಥೆಗಳಿಗೆ– ಆ ಪರಂಪರೆಯನ್ನು ಮುಂದುವರೆಸಿದ ಬೌದ್ಧ–ಜೈನ ಕಥಾ ಪರಂಪರೆಗೆ ಅನೇಕ ಒಳ ಆಯಾಮಗಳಿರುತ್ತವೆ. ಈ ದೃಷ್ಟಿಯಿಂದ ವಿದ್ಯಾಪತಿ ಸ್ವತಂತ್ರ ಕಥೆಗಾರ ಉಳಿದವರು ಸ್ವತಂತ್ರ ಕಥೆಗಾರರಲ್ಲ. ಉಳಿದವರಲ್ಲಿ ಕಥೆಗಳು ಉಕ್ಕಿ ಬಂದು ತಾವೇ ಮಾತನಾಡುತ್ತವೆ ಕಡೆಯಲ್ಲಿ ತಮಗೆ ಬೇಕಾದದ್ದನ್ನು ಚೂರು ಸೇರಿಸುವ ಹಕ್ಕು ಮಾತ್ರ ಉಳಿದವರಿಗೆ. ಸೃಷ್ಟಿಯಲ್ಲಿ ಮನುಷ್ಯಶ್ರೇಷ್ಠ, ಮನುಷ್ಯರಲ್ಲಿ ತರ–ತಮ ಇದೆ ಎಂದು ನಂಬಿದ್ದ ವಿದ್ಯಾಪತಿ ಎಲ್ಲೂ ಅ–ಮಾನವ ಸಂಗತಿ, ಪ್ರಕೃತಿಯನ್ನು ಕಥೆಯ ಕೇಂದ್ರ ಪಾತ್ರವಾಗಿಸುವುದಿಲ್ಲ. ಬೌದ್ಧ–ಜೈನ ಪರಂಪರೆಯ ಕತೆಗಳಲ್ಲಿ 'ಸಂಸ್ಕಾರ' ಎಂದರೆ ವಿಕಾಸಶೀಲತೆ;

ಆದರೆ, ಇಲ್ಲಿ ಅದು ಅಂತಿಮ ನಿಯಂತ್ರಣ 'ಒಬ್ಬ ಚೋರನ ಕಥೆ' ಇದಕ್ಕೆ ಉತ್ತಮ ಉದಾಹರಣೆ. ಆದರೆ, ಇವನಿಗೆ ಪರಂಪರಾಗತ ಕಥೆಗಳ ಜತೆಗೆ ಇರುವ ಸಂಬಂಧ ಎಲ್ಲಿ ಎಂದರೆ ಇಲ್ಲೂ ನರಿಗಳು ಊಳಿಡುತ್ತವೆ. ಚೋರರ ನಾಯಕನಿಗೆ ಅದು ತಿಳಿಯುತ್ತದೆ ಏಕೆಂದರೆ, ಆತ "ಸರೀಸೃಪ".

ಈ ಹಿನ್ನೆಲೆಯಿಂದ ಹೇಳುವುದಾದರೆ ವಿದ್ಯಾಪತಿ 'ಪ್ರತಿರೂಪ'ದ ಕತೆಗಾರ. ಎಂದರೆ ಉಳಿದ ಕಥಾ ಪರಂಪರೆಗಳಲ್ಲಿ– ಕಾವ್ಯ ಪರಂಪರೆಗಳಲ್ಲಿ ಯಾವುದು ವಿಸ್ತಾರವಾಗಿ, ಭಾವುಕವಾಗಿ, ತನ್ಮಯತೆಯಿಂದ ಶೋಧಿತ ವಾಗಿರುತ್ತದೋ ಅದರ ಚಿಕ್ಕ ಪ್ರತಿರೂಪವನ್ನು ವಿದ್ಯಾಪತಿ ಕಟ್ಟುತ್ತಾನೆ ಅಲ್ಲಿ ತನ್ಮಯತೆ, ಲೋಕಾತೀತ ಸತ್ಯವನ್ನು ಹಿಡಿಯುವ ಪ್ರಯತ್ನವಿದ್ದರೆ ವಿದ್ಯಾಪತಿ ಯಲ್ಲಿ ಘನವ್ಯಂಗ್ಯ ಇಡೀ ಕಥೆಯನ್ನು ಪುನರ್ರಚಿಸುತ್ತದೆ. "ಮಾತುಗಾರನ ಕಥೆ"ಯನ್ನೇ ಇದಕ್ಕೆ ಉಜ್ವಲ ಉದಾಹರಣೆಯನ್ನಾಗಿ ಪರಿಗಣಿಸಬಹುದು ಈ ಕತೆ ಮೂಲತಃ ಬೌದ್ಧ ಸಂಪ್ರದಾಯದ ಕಿಸಾಗೌತಮಿಯ ಕಥೆಯೇ ಸಾವಿಲ್ಲದ ಮನೆಯ ಸಾಸಿವೆಕಾಳಿನ ಕತೆ ಸಾವು ಎಂಬ ಸತ್ಯವನ್ನು ತೀವ್ರವಾಗಿ ಹಿಡಿಯುವ ಕಥೆ. ಆದರೆ, ವಿದ್ಯಾಪತಿ ಇಡೀ ಕಥೆಯನ್ನು ಒಂದು ಜಾಣತನದ ತಂತ್ರದ ಕಥೆಯನ್ನಾಗಿಸುತ್ತದೆ. ಬೌದ್ಧರಲ್ಲಿ ಅದು ಸಾವಿನ ಕತೆಯಾದರೆ, ಇಲ್ಲಿ ಅದು ಜೀವನದ ಕತೆ. ಒಬ್ಬ ಕಳ್ಳ ಸಾಸಿವೆಗಾತ್ರದ ಬಂಗಾರದ ಕಾಳುಗಳನ್ನು ತರಿಸಿ ಕೊಳದ ತಡಿಯಲ್ಲಿ ಬಿತ್ತಲು ವ್ಯವಸ್ಥೆ ಮಾಡುತ್ತಾನೆ. ಆದರೆ, ಬಿತ್ತುವವರು ಮಾತ್ರ ಎಂದೂ ಮೋಸ ಮತ್ತು ಕಳ್ಳತನ ಮಾಡದ ಮಂದಿಯಾಗಿರಬೇಕು ಸಹಜವಾಗಿಯೇ ರಾಜನಿಂದ ಹಿಡಿದು ಎಲ್ಲರೂ ಹಿಂದೆಗೆಯುತ್ತಾರೆ ಶೂಲಕ್ಕೆ ಏರಿದ್ದ ಕಳ್ಳ ಜೀವ ಉಳಿಸಿಕೊಳ್ಳುತ್ತಾನೆ ಬೌದ್ಧರಲ್ಲಿ ವಿಷಾದಮಯ ಜ್ಞಾನ, ಇಲ್ಲಿ ಅದು ವಿನೋದ, ಜೀವಿಸುವ ಛಲದ ವಿನೋದ

ಹೀಗೆ ವಿದ್ಯಾಪತಿ ಮಹಾರೂಪಗಳ ಪ್ರತಿರೂಪಗಳನ್ನು ಉದ್ದಕ್ಕೂ ಸೃಷ್ಟಿಸುತ್ತಾನೆ.[1] ಆ ಮೂಲಕ ಚಿಕ್ಕ ಮಟ್ಟದ ವೈನೋದಿಕ ಕತೆಗಾರನೂ ಆಗಿಬಿಡುತ್ತಾನೆ ಎಂಬ ಮಾತು ಬೇರೆ. ಸಾವು ಪರಂಪರೆಯ ಕಥೆಗಳಲ್ಲಿ ಹೇಗೆ

1 ಈ ಪರಿಕಲ್ಪನೆಗಳನ್ನು ರೂಪಿಸುವಲ್ಲಿ ಪ್ರಸಿದ್ಧ ರಷ್ಯನ್ ಸಾಹಿತ್ಯ ಚಿಂತಕ ಬಾಖ್ತಿನ್‌ನ ವಿಚಾರಗಳಿಗೆ ಋಣಿಯಾಗಿದ್ದೇನೆ ಆತನಲ್ಲಿ ಸಿಕ್ಕ ಒಳನೋಟವನ್ನು ನನಗೆ ಬೇಕಾದಂತೆ ಪೂರ್ಣವಾಗಿ ಮಾರ್ಪಡಿಸಿ ಕೊಂಡಿದ್ದೇನೆ ಮೂಲಕ್ಕೆ ನೋಡಿ:
Katerina clark, Michael Holquist - Mikhail Bakhtin
(Harvard university press, 1984)

ಮಹಾ ವಸ್ತು, ಮಹಾರೂಪವೋ ಹಾಗೆಯೇ ಪ್ರೇಮ ಎನ್ನುವುದು ಕೂಡಾ. ಪ್ರೇಮ ಜನ್ಮಾಂತರಗಳಲ್ಲೂ ಬಿಡದೆ ಬೆಂಬತ್ತುವ ಶಕ್ತಿ. ಅದು ಸಾವಿಗೂ ಹೆದರುವುದಿಲ್ಲ. ಮತ್ತೆ ಹುಟ್ಟಿ ಬರುತ್ತದೆ. ಎಲ್ಲ ಪವಿತ್ರ ಸ್ಮೃತಿಗಳಿಗೂ ಮೀರಿದ ಸ್ಮೃತಿ ಪ್ರೇಮ. ಈ ದರ್ಶನದ ಪ್ರೇಮ ಭಾರತೀಯ ಸಾಹಿತ್ಯ ಪರಂಪರೆಯ ಮಹಾವಸ್ತುಗಳಲ್ಲಿ ಒಂದು. (ಉದಾ: 'ಕಾದಂಬರಿ'ಯನ್ನೇ ತೆಗೆದುಕೊಳ್ಳಿ.) 'ಚಿತ್ರಕಲಾ ನಿಪುಣನ ಕತೆ'ಯಲ್ಲಿ ನಿಷ್ಣಾತ ಚಿತ್ರಕಾರನಾದ ಮೂಲದೇವ ಸಂಚಿನಿಂದ ಕೌಮುದಿ ಎಂಬ ರಾಜಕುಮಾರಿಯ ಪೂರ್ವಜನ್ಮದ ವಿವರ ತಿಳಿದು, ಅದಕ್ಕೆ ತಕ್ಕಂತೆ ಚಿತ್ರ ಬರೆದು ತಾನೇ ಆಕೆಯ ಪೂರ್ವಜನ್ಮದ ಪ್ರಿಯಕರ ಎಂದು ನಂಬಿಸಿ ಆಕೆಯನ್ನು ಮದುವೆಯಾಗುತ್ತಾನೆ. ಜನ್ಮಾಂತರದ ಪ್ರೇಮ ರೋಮಾಂಚಕ ಮತ್ತು ಹೃದಯವಿದ್ರಾವಕ. ಆದರೆ, ವಿದ್ಯಾಪತಿಯ ಪ್ರತಿರೂಪ ಸೃಷ್ಟಿಯಲ್ಲಿ ಮನಸ್ಥಿತಿಗಿಂತ ಕಲೆ ಮುಖ್ಯ. ಚಾತುರ್ಯ ಮುಖ್ಯ. ಹೀಗೆ ವಿದ್ಯಾಪತಿ ಎಲ್ಲವನ್ನೂ ಒಡೆದು ಚಾತುರ್ಯದ ರಚನೆಗಳನ್ನಾಗಿ ವಿಂಗಡಿಸುತ್ತಾನೆ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕಾಣುವ ಅಂತರ್ ಪಠ್ಯೀಯತೆಯ ಒಂದು ನಿರ್ದಿಷ್ಟ ಮಾದರಿ ಇದು.

ವಿದ್ಯಾಪತಿಯೂ ತನ್ನ ರೀತಿಯ ಧರ್ಮದ ಕತೆಗಾರನೇ ಆದರೆ, ಆತನ ಕತೆಗಳಲ್ಲಿನ ಧರ್ಮದ ಪರಿಕಲ್ಪನೆಗೂ ಜೈನ ಕಥಾ ಸಂಪ್ರದಾಯದ ಧರ್ಮದ ಪರಿಕಲ್ಪನೆಗೂ ಅನೇಕ ವ್ಯತ್ಯಾಸಗಳಿವೆ. ವಿದ್ಯಾಪತಿಯಲ್ಲಿ ನಿಜವಾದ ಚಾರಿತ್ರಿಕ ಮಂದಿ ಬರುತ್ತಾರೆ. ನಿಜವಾದ ಚಾರಿತ್ರಿಕ ಘಟನೆಗಳು ಬರುತ್ತವೆ. ಆದರೆ, ಆತನಲ್ಲಿ ಒಂದು ನಿರ್ದಿಷ್ಟ ಮೌಲ್ಯಪ್ರಜ್ಞೆಯೇ ಕಥೆ. ಭರ್ತೃಹರಿಯ ಮೇಲಿನ ಕಥೆ ಇದಕ್ಕೆ ಉದಾಹರಣೆ. "ಪರಿಪೂರ್ಣತೆಯನ್ನು ಪಡೆದವನ ಕಥೆ"ಯ ವಸ್ತು "ಗೋರಕ್ಷಾವಿಜಯ"ದ ವಸ್ತುವೇ. ಮೌಲ್ಯಪ್ರಜ್ಞೆಯ ಮೂಲಕ ಕಥೆ ಹೇಳುವವನು ನಿಜವಾದ ಮನುಷ್ಯರ ಕಥೆಗಳನ್ನು ಅಷ್ಟಾಗಿ ತೀವ್ರತೆಯಿಂದ ಹೇಳಲಾರ. ಮನುಷ್ಯರ ಬದುಕಿನಿಂದ ಒಂದು ತತ್ವವನ್ನು ಸೋಸಿ ಹೊರತೆಗೆದು ಅದನ್ನು ಒಂದು ಪ್ರಸಂಗವನ್ನಾಗಿಸುವ ಕಥಾವಿನ್ಯಾಸ ವಿದ್ಯಾಪತಿಯದು. ಮೂಗಿನಲ್ಲಿ ಬ್ರಹ್ಮಕೀಟ ಹೊಕ್ಕವನ ಕಥೆಯೂ ಈ ಬಗೆಯದೆ. ಶುದ್ಧ ಲೌಕಿಕನಾಗಿ ಬ್ರಹ್ಮಜ್ಞಾನದ ಜಿಜ್ಞಾಸೆಯನ್ನು ಈತ ಕೀಟವನ್ನಾಗಿಯೂ ಕಾಣಬಲ್ಲ. ಹೀಗೆ ಲೌಕಿಕ-ಅಲೌಕಿಕಗಳನ್ನು ಮಾಂತ್ರಿಕನ ಕೈಚಳಕದಲ್ಲಿ ವಿದ್ಯಾಪತಿ ಬಿಡಿಸುತ್ತಾನೆ.

ಜೈನರು ತಮ್ಮ ಧಾರ್ಮಿಕ ಕಥೆಗಳನ್ನು ನಾಲ್ಕು ಎಂದು ವಿಂಗಡಿಸುತ್ತಾರೆ.[1]

೧) ಆಕ್ಷೇಪಿಣಿ(ಆಕರ್ಷಕ) ೨) ವಿಕ್ಷೇಪಿಣಿ(ನೇತ್ಯಾತ್ಮಕ) ೩) ಸಂವೇಗಜನನಿ (ಜ್ಞಾನೋದಯ) ೪) ನಿರ್ವೇದ ಜನನಿ (ವೈರಾಗ್ಯ). ಇದು ನಿಜವಾದ ಮನುಷ್ಯರ ತೀವ್ರ ಕಥೆಗಳಲ್ಲಿ ಹುಟ್ಟುವ ವರ್ಗೀಕರಣ. ಆದರೆ, ವಿದ್ಯಾಪತಿ ತಾತ್ವಿಕ ಪ್ರಶ್ನೆಯನ್ನು ಕಥೆಯಾಗಿಸಬಲ್ಲ ಜಾಣ. ಆತ "ಆಕ್ಷೇಪಿಣಿ"ಗೆ ಹತ್ತಿರ ವಿರುವ ಕಥೆಗಳನ್ನು ಸೊಗಸಾಗಿ ಬರೆಯಬಲ್ಲ. ಜೈನರಲ್ಲಿ "ನಿರ್ವೇದ ಜನನಿ" ಆಗಬಹುದಾಗಿದ್ದ ಬ್ರಾಹ್ಮಣ ಮತ್ತು ಬ್ರಹ್ಮಕೀಟದ ಕಥೆಯನ್ನೂ ವಿದ್ಯಾಪತಿ "ಆಕ್ಷೇಪಿಣಿ"ಯಾಗಿ ಪರಿವರ್ತಿಸಿರುವುದೇ ವಿದ್ಯಾಪತಿಯ ಜಾಣ್ಮೆ. ಅತಿ ಜಾಣತನದ ಶಕ್ತಿ ಮತ್ತು ದೌರ್ಬಲ್ಯಗಳೆರಡೂ ವಿದ್ಯಾಪತಿಯಲ್ಲಿ ಎದ್ದು ಕಾಣುತ್ತವೆ ಅತಿ ಜಾಣತನ ಮನುಷ್ಯರ ತೀವ್ರ ಭಾವನಾಮಯ ಗಳಿಗೆಗಳನ್ನು ತನ್ಮಯತೆಯಿಂದ ಬರೆಯಲಾರದು. ಮೋಹವನ್ನು ಅದು ಸರ್ವತ್ರಸ್ಥಿತಿಯನ್ನಾಗಿ ಸ್ವೀಕರಿಸಲಾರದು. ಹೀಗೆ ಜೈನರ ಉಳಿದ ಮೂರು ವರ್ಗಗಳನ್ನೂ ತನ್ನ ಕಥನ ಕ್ರಮದಲ್ಲಿ "ಆಕ್ಷೇಪಿಣಿ"ಯಾಗೇ ಪರಿವರ್ತಿಸುತ್ತಾನೆ. ವಿವಿಧ ಪರಂಪರೆಗಳಲ್ಲಿ ನಡೆದ ಪರಸ್ಪರ ಮುಖಾಮುಖಿಯ ಒಂದು ಸ್ವಾರಸ್ಯಕರ ಪ್ರಸಂಗ ಇದು. ಯಾವುದು ಪ್ರತ್ಯೇಕ –ಭಿನ್ನ ಎಂದು ಭಾವಿಸುತ್ತೇವೆಯೋ ಅವು ಪರಸ್ಪರ ಬೆರೆತು ವಿಶಿಷ್ಟತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತವೆ. ವಿದ್ಯಾಪತಿ ಹೀಗೆ ವೈದಿಕ ವಿಶಿಷ್ಟತೆಯವನು.

1. Jagadish Chandra Jain, Prakrit Narrative literature (Delhi, Munshiram Manohar Lal, 1981) P-13

## ಅಕ್ಷರ ಚಿಂತನ

# ಪುರುಷ ಪರೀಕ್ಷೆ

ಮಧ್ಯಯುಗೀನ ಭಾರತೀಯ ಲೇಖಕರಲ್ಲಿ ವಿದ್ಯಾಪತಿ ತುಂಬ ವಿಶಿಷ್ಟನಾದವನು ಈತ ೧೫ನೇ ಶತಮಾನದ ಕವಿ, ಕತೆಗಾರ, ಚಿಂತಕ ಪ್ರಸ್ತುತ ಕೃತಿ 'ಪುರುಷ ಪರೀಕ್ಷೆ' ಸಂಸ್ಕೃತ ಕಥಾ ಸಾಹಿತ್ಯದಲ್ಲಿ ಕುತೂಹಲಕಾರಿ ಸ್ಥಾನ ಪಡೆದಿದೆ ವಿದ್ಯಾಪತಿ ರಂಜಕವಾಗಿ, ಆಕರ್ಷಕವಾಗಿ, ತಮಾಷೆಯಾಗಿ, ಕತೆ ಹೇಳಬಲ್ಲ ಸಾಂಪ್ರದಾಯಕ ಮೌಲ್ಯಗಳನ್ನು ಕತೆಗಳ ಮೂಲಕ ಆಕರ್ಷಕವಾಗಿ ಹೇಳಬಲ್ಲ

ಕನ್ನಡದ ಪ್ರಸಿದ್ಧ ವಿಮರ್ಶಕ–ಕವಿ ಪ್ರೊ| ಡಿ ಎ ಶಂಕರ್ 'ಅಕ್ಷರ ಚಿಂತನ'ಕ್ಕಾಗಿ ಈ ಕೃತಿಯನ್ನು ಅನುವಾದಿಸಿ ಕೊಟ್ಟಿದ್ದಾರೆ

